# ಅವತಾರತ್ರಯ

# ಅಷ್ಟೋತ್ತರಶತನಾಮಸ್ತೋತ್ರಮ್

[ಶ್ರೀರಘುಪ್ರವೀರತೀರ್ಥವಿರಚಿತಮ್]



## ತತ್ತ್ವಸಂಶೋಧನ ಸಂಸತ್

ಶ್ರೀಪಲಿಮಾರು ಮಠ, ಉಡುಪಿ

ಉಡುಪಿ ಶ್ರೀ ಕೃಷ್ಣ ಮಠದಲ್ಲಿರುವ

# ಶ್ರೀ ರಘುಪ್ರವೀರ ತೀರ್ಥರ

ಬೃಂದಾವನ



## ಅವತಾರತ್ರಯ

# ಅಷ್ಟೋತ್ತರಶತನಾಮಸ್ತೋತ್ರಮ್

[ಶ್ರೀರಘುಪ್ರವೀರತೀರ್ಥವಿರಚಿತಮ್]


ಸಂಪಾದಕರು

ಶ್ರೀ ವಿ। ವಂಶೀಕೃಷ್ಣಾಚಾರ್ಯ ಪುರೋಹಿತ್

ಶ್ರೀ ವಿ। ಕಾ. ವೇ. ಶಂಕರನಾರಾಯಣ ಭಟ್

ಶ್ರೀ ವಿ। ಬಿ. ಶ್ರೀನಿವಾಸ ಭಟ್



ಪ್ರಕಾಶನ

ತತ್ತ್ವಸಂಶೋಧನ ಸಂಸತ್

[ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ.]

ಶ್ರೀಪಲಿಮಾರು ಮಠ , ಉಡುಪಿ.

# ಅವತಾರತ್ರಯ ಅಷ್ಟೋತ್ತರಶತನಾಮಸ್ತೋತ್ರಮ್

[ಶ್ರೀರಘುಪ್ರವೀರತೀರ್ಥವಿರಚಿತಮ್]

ಸಂಪಾದಕರು : ವಿ। ವಂಶೀಕೃಷ್ಣಾಚಾರ್ಯ ಪುರೋಹಿತ್,
ವಿ। ಕಾ. ವೇ. ಶಂಕರನಾರಾಯಣ ಭಟ್,
ವಿ। ಬಿ. ಶ್ರೀನಿವಾಸ ಭಟ್.

ಪ್ರಕಾಶನ : ತತ್ತ್ವಸಂಶೋಧನ ಸಂಸತ್,
[ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ.]
ಶ್ರೀಪಲಿಮಾರು ಮಠ, ಉಡುಪಿ–576 101.
Phone : 0820-2528403

ಪ್ರಥಮ ಮುದ್ರಣ : 2013 (1000 ಪ್ರತಿಗಳು)
ದ್ವಿತೀಯ ಮುದ್ರಣ : 2014 (2000 ಪ್ರತಿಗಳು)



ಬೆಲೆ : : ರೂ. 30/-

ಪುಟ : ೧೦ + 38

ಮುಖಪುಟವಿನ್ಯಾಸ : ಶ್ರೀ ರಾಘವೇಂದ್ರ ಕಿರಣ್, ಬೆಂಗಳೂರು

ISBN 978-93-81807-15-6

ಅಕ್ಷರ ಸಂಯೋಜನೆ : 'ಶ್ರೀನವದುರ್ಗಾ ಲೇಸರ್‌ಟೆಕ್',
C/o. ಡಾ। ಪದ್ಮನಾಭ ಕೇಕುಣ್ಣಾಯ, ಉಡುಪಿ. [Mob. 9342438727]

ಮುದ್ರಣ : ವಾಣೀ ಪ್ರೆಸ್, ಚಾಮರಾಜಪುರ, ಮೈಸೂರು–೫
ದೂರವಾಣಿ : 0821–2330295, 4253295, 9886788295



# ಕುಲಪತಿಗಳ ಅನುಗ್ರಹಸಂದೇಶ

**ಶ್ರೀಶ್ರೀವಿದ್ಯಾಧೀಶತೀರ್ಥಶ್ರೀಪಾದರು**
ಶ್ರೀಮಧ್ವಾಚಾರ್ಯಮೂಲಮಹಾಸಂಸ್ಥಾನಮ್
ಶ್ರೀಹೃಷೀಕೇಶತೀರ್ಥಪೀಠ, ಪಲಿಮಾರು ಮಠ,
ಉಡುಪಿ.

ಪಲಿಮಾರು ಮಠದ ಯತಿ ಪರಂಪರೆಯಲ್ಲಿ ಇಪ್ಪತ್ತೈದನೆಯವರು ಶ್ರೀಶ್ರೀರಘುಪ್ರವೀರ ತೀರ್ಥರು. ನಿರಶನ, ಮೌನವ್ರತ, ಏಕಾಗ್ರತೆ ಮುಂತಾದ ಹತ್ತುಹಲವು ಸಾಧನೆಗಳಿಂದ ಭಗವಂತ ನನ್ನು ಭಜಿಸಿದವರು. ತಮ್ಮ ತಪಸ್ಸಿನಿಂದ ಘಟಿಕಾಚಲದಲ್ಲಿ ಹನುಮಂತದೇವರನ್ನು ಒಲಿಸಿಕೊಂಡವರು. ತಮ್ಮ ಪರ್ಯಾಯಾವಧಿಯಲ್ಲಿ ಅಭಿಷೇಕಕ್ಕೆ ಹಾಲು ಕೊಡುವ ಆಕಳನ್ನು ಕೊಂದ ಹುಲಿಯನ್ನು ತಮ್ಮ ಮಂತ್ರಶಕ್ತಿಯಿಂದಲೇ ಶರಣಾಗುವಂತೆ ಮಾಡಿ, ಪಶ್ಚಾತ್ತಾಪದಿಂದ ಪ್ರಾಣಬಿಡುವಂತೆ ಮಾಡಿಸಿ, 'ಹುಲಿಕೊಂದ ಸ್ವಾಮಿಗಳು' ಎಂದೇ ಪ್ರಸಿದ್ಧರಾದವರು. ಉಡುಪಿಯಲ್ಲಿರುವ ಯತಿಗಳ ವೃಂದಾವನಗಳ ಮಧ್ಯದಲ್ಲಿ ಹುಲಿಯ ಸಮಾಧಿಯಿದ್ದು, ಅದರ ಮೇಲಿರುವ ಹುಲಿಯ ಪ್ರತಿಕೃತಿಯನ್ನು ಇಂದಿಗೂ ನಾವು ನೋಡಬಹುದಾಗಿದೆ. ವೃಂದಾವನಗಳ ಸಮೂಹದಲ್ಲಿ ಎತ್ತರದ ವೇದಿಕೆಯಲ್ಲಿರುವ ವೃಂದಾವನವೇ ಶ್ರೀರಘುಪ್ರವೀರ ತೀರ್ಥರದ್ದು. ಇಂತಹ ಮಹಾಮಹಿಮರು ರಚಿಸಿದ ಹನುಮತ್-ಭೀಮ-ಮಧ್ವಾಷ್ಟೋತ್ತರಶತನಾಮಸ್ತೋತ್ರವೇ ಈಗ ಮುದ್ರಿತವಾಗುತ್ತಿದೆ. ಈ ಕೃತಿಯ ಪ್ರಾಚ್ಯಪಾಠವನ್ನು ಸಂಪಾದಿಸಲು ನಮ್ಮ ಯುವವಿದ್ವಾಂಸರು ತುಂಬ ಶ್ರಮಿಸಿದ್ದಾರೆ. ಮಹಾತ್ಮರು ರಚಿಸಿದ ಈ ಕೃತಿಯ ಪಠನ ಹಾಗೂ ನಾಮಾವಳಿಯಿಂದ ಮಾಡಿದ ಅರ್ಚನೆ ಶೀಘ್ರಫಲದಾಯಕವಾಗಬಲ್ಲುದು.

ಶ್ರೀರಘುಪ್ರವೀರತೀರ್ಥರು ಪ್ರತಿಷ್ಠಾಪಿಸಿದ ಹನುಮಂತದೇವರು ಪಲಿಮಾರಿನಲ್ಲಿದ್ದಾರೆ. ಆ ಪ್ರಾಣದೇವರ ದಿನನಿತ್ಯದ ಪೂಜಾಕೈಂಕರ್ಯವನ್ನು ಶ್ರದ್ಧೆಯಿಂದ ಮಾಡಿ ಹನುಮಂತನ ಸೇವೆಯನ್ನು ಗಿರೀಶ ಭಟ್ ಮಾಡುತ್ತಿದ್ದಾರೆ. ತನ್ನ ಪುತ್ರನ ಉಪನಯನವನ್ನು ಅದೇ ಸನ್ನಿಧಿಯಲ್ಲಿ ಮಾಡುತ್ತಿದ್ದಾರೆ. ಈ ಶುಭ ಸಂದರ್ಭದಲ್ಲಿ ಶ್ರೀರಘುಪ್ರವೀರತೀರ್ಥರೇ ರಚಿಸಿದ ಈ ಕೃತಿಯನ್ನು ಮುದ್ರಿಸುತ್ತಿದ್ದಾರೆ.

ಹರಿ-ಗುರುಗಳು ಗಿರೀಶ ಭಟ್ ಹಾಗೂ ಅವರ ಪುತ್ರನಿಗೆ ಅನುಗ್ರಹಿಸಲಿ ಎಂದು ನಮ್ಮ ಉಪಾಸ್ಯಮೂರ್ತಿಯಾದ ಸೀತಾಪತಿ ಶ್ರೀರಾಮಚಂದ್ರನಲ್ಲಿ ಬೇಡಿಕೊಳ್ಳುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು.



# ಮಂಗಲಾಷ್ಟಕಮ್

ಲಕ್ಷ್ಮೀರ್ಯಸ್ಯ ಪರಿ–ಗ್ರಹಃ ಕಮಲ–ಭೂಃ ಸೂನುರ್ಗರುತ್ಮಾನ್ ರಥಃ
ಪೌತ್ರಶ್ಚಂದ್ರ–ವಿಭೂಷಣಃ ಸುರ–ಗುರುಃ ಶೇಷಶ್ಚ ಶಯ್ಯಾ ಪುನಃ ।
ಬ್ರಹ್ಮಾಂಡಂ ವರ–ಮಂದಿರಂ ಸುರ–ಗಣಾ ಯಸ್ಯ ಪ್ರಭೋಃ ಸೇವಕಾಃ
ಸ ತ್ರೈಲೋಕ್ಯ–ಕುಟುಂಬ–ಪಾಲನ–ಪರಃ ಕುರ್ಯಾದ್ಧರಿರ್ಮಂಗಲಮ್ ॥ ೧ ॥

ಬ್ರಹ್ಮಾ ವಾಯು–ಗಿರೀಶ–ಶೇಷ–ಗರುಡಾ ದೇವೇಂದ್ರ–ಕಾಮೌ ಗುರು–
ಶ್ಚಂದ್ರಾರ್ಕೌ ವರುಣಾನಲೌ ಮನು–ಯಮೌ ವಿತ್ತೇಶ–ವಿಘ್ನೇಶ್ವರೌ ।
ನಾಸತ್ಯೌ ನಿರ್ಋತಿರ್ಮರುದ್–ಗಣ–ಯುತಾಃ ಪರ್ಜನ್ಯ–ಮಿತ್ರಾದಯಃ
ಸಸ್ತ್ರೀಕಾಃ ಸುರ–ಪುಂಗವಾಃ ಪ್ರತಿ–ದಿನಂ ಕುರ್ವಂತು ನೋ ಮಂಗಲಮ್ ॥ ೨ ॥

ವಿಶ್ವಾಮಿತ್ರ–ಪರಾಶರೌರ್ವ–ಭೃಗವೋಽಗಸ್ತ್ಯಃ ಪುಲಸ್ತ್ಯಃ ಕ್ರತುಃ
ಶ್ರೀಮಾನತ್ರಿ–ಮರೀಚ್ಯುಚಥ್ಯ–ಪುಲಹಾಃ ಶಕ್ತಿರ್ವಸಿಷ್ಠೋಽಂಗಿರಾಃ ।
ಮಾಂಡವ್ಯೋ ಜಮದಗ್ನಿ–ಗೌತಮ–ಭರದ್ವಾಜಾದಯಸ್ತಾಪಸಾಃ
ಶ್ರೀಮದ್–ವಿಷ್ಣು–ಪದಾಂಬುಜೈಕ–ಶರಣಾಃ ಕುರ್ವಂತು ನೋ ಮಂಗಲಮ್ ॥ ೩ ॥

ಮಾಂಧಾತಾ ನಹುಷೋಽಂಬರೀಷ–ಸಗರೌ ರಾಜಾ ಪೃಥುರ್ಹೈಹಯಃ
ಶ್ರೀಮಾನ್ ಧರ್ಮ–ಸುತೋ ನಳೋ ದಶರಥೋ ರಾಮೋ ಯಯಾತಿರ್ಯದುಃ ।
ಇಕ್ಷ್ವಾಕುಶ್ಚ ವಿಭೀಷಣಶ್ಚ ಭರತಶ್ಚೋತ್ತಾನಪಾದ–ಧ್ರುವಾ–
ವಿತ್ಯಾದ್ಯಾ ಭುವಿ ಭೂಭುಜಶ್ಚ ಸತತಂ ಕುರ್ವಂತು ನೋ ಮಂಗಲಮ್ ॥ ೪ ॥

ಶ್ರೀ–ಮೇರುರ್ಹಿಮವಾಂಶ್ಚ ಮಂದರ–ಗಿರಿಃ ಕೈಲಾಸ–ಶೈಲಸ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯ–ನಿಷಧೌ ಸಿಂಹಸ್ತಥಾ ರೈವತಃ ।
ಸಹ್ಯಾದ್ರಿರ್ವರ–ಗಂಧಮಾದನ–ಗಿರಿರ್ಮೈನಾಕ–ಗೋಮಂತಕಾ–
ವಿತ್ಯಾದ್ಯಾ ಭುವಿ ಭೂಧರಾಶ್ಚ ಸತತಂ ಕುರ್ವಂತು ನೋ ಮಂಗಲಮ್ ॥ ೫ ॥

ಗಂಗಾ–ಸಿಂಧು–ಸರಸ್ವತೀ ಚ ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗು–ಸರಯೂಃ ಶ್ರೀ–ಗಂಡಕೀ ಗೋಮತೀ ।
ಕಾವೇರೀ–ಕಪಿಲಾ–ಪ್ರಯಾಗ–ಕಿಟಿಜಾ–ನೇತ್ರಾವತೀತ್ಯಾದಯೋ
ನದ್ಯಃ ಶ್ರೀಹರಿ–ಪಾದ–ಪಂಕಜ–ಭುವಃ ಕುರ್ವಂತು ನೋ ಮಂಗಲಮ್ ॥ ೬ ॥

ವೇದಾಶ್ಚೋಪನಿಷದ್–ಗಣಾಶ್ಚ ವಿವಿಧಾಃ ಸಾಂಗಾಃ ಪುರಾಣಾನ್ವಿತಾ
ವೇದಾಂತಾ ಅಪಿ ಮಂತ್ರ–ತಂತ್ರ–ಸಹಿತಾಸ್ತರ್ಕಾಃ ಸ್ಮೃತೀನಾಂ ಗಣಾಃ ।
ಕಾವ್ಯಾಲಂಕೃತಿ–ನೀತಿ–ನಾಟಕ–ಯುತಾಃ ಶಬ್ದಾಶ್ಚ ನಾನಾ–ವಿಧಾಃ
ಶ್ರೀವಿಷ್ಣೋರ್ಗುಣ–ನಾಮ–ಕೀರ್ತನ–ಪರಾಃ ಕುರ್ವಂತು ನೋ ಮಂಗಲಮ್ ॥ ೭ ॥

ಆದಿತ್ಯಾದಿ–ನವ–ಗ್ರಹಾಃ ಶುಭ–ಕರಾ ಮೇಷಾದಯೋ ರಾಶಯೋ
ನಕ್ಷತ್ರಾಣಿ ಸ–ಯೋಗಕಾಶ್ಚ ತಿಥಯಸ್ತದ್–ದೇವತಾಸ್ತದ್–ಗಣಾಃ ।
ಮಾಸಾಬ್ದಾ ಋತವಸ್ತಥೈವ ದಿವಸಾಃ ಸಂಧ್ಯಾಸ್ತಥಾ ರಾತ್ರಯಃ
ಸರ್ವೇ ಸ್ಥಾವರ–ಜಂಗಮಾಃ ಪ್ರತಿ–ದಿನಂ ಕುರ್ವಂತು ನೋ ಮಂಗಲಮ್ ॥ ೮ ॥

ಇತ್ಯೇತದ್ ವರ–ಮಂಗಲಾಷ್ಟಕಮಿದಂ ಶ್ರೀರಾಜರಾಜೇಶ್ವರೇ–
ಣಾಽಽಖ್ಯಾತಂ ಜಗತಾಮಭೀಷ್ಟ–ಫಲ–ದಂ ಸರ್ವಾಶುಭ–ಧ್ವಂಸನಮ್ ।
ಮಾಂಗಲ್ಯಾದಿ–ಶುಭ–ಕ್ರಿಯಾಸು ಸತತಂ ಸಂಧ್ಯಾಸು ವಾ ಯಃ ಪಠೇದ್
ಧರ್ಮಾರ್ಥಾದಿ–ಸಮಸ್ತ–ವಾಂಛಿತ–ಫಲಂ ಪ್ರಾಪ್ನೋತ್ಯಸೌ ಮಾನವಃ ॥ ೯ ॥

॥ ಇತಿ ಶ್ರೀರಾಜರಾಜೇಶ್ವರಯತಿವಿರಚಿತಂ ಮಂಗಲಾಷ್ಟಕಂ ಸಂಪೂರ್ಣಮ್ ॥

*

# ಮಧ್ವರು ಕಂಡ ಶ್ರೀರಾಮ

**ಅನಂತಸೂರ್ಯದೀಧಿತಿರ್ದುರಂತಸದ್ಗುಣಾರ್ಣವಃ ।**
**ಸಹಸ್ರಸೂರ್ಯಮಂಡಲಜ್ವಲತ್ ಕಿರೀಟಮೂರ್ಧಜಃ ।**
**ಸುನೀಲಕುಂತಳಾವೃತಾಮಿತೇಂದುಕಾಂತಸನ್ಮುಖಃ ॥ ೧ ॥**

ಶ್ರೀರಾಮನು ಎಣೆಯಿಲ್ಲದಷ್ಟು ಸೂರ್ಯರ ಪ್ರಭೆಯುಳ್ಳವನು. ಕೊನೆಯಿರದ ಸದ್ಗುಣಗಳ ಸಾಗರನು. ಸಾವಿರಾರು ಸೂರ್ಯಮಂಡಲಗಳಂತೆ ಹೊಳೆಯುತ್ತಿರುವ ಕಿರೀಟವನ್ನು ಹೊತ್ತ ಕೂದಲುಗಳುಳ್ಳವನು. ಸುಂದರವಾದ ಕಪ್ಪು ಕೂದಲುಗಳಿಂದ ಸುತ್ತುವರಿಯಲ್ಪಟ್ಟ, ಅನಂತಚಂದ್ರರ ಪ್ರಭೆಯುಳ್ಳ, ಮನೋಹರವಾದ ಮುಖವುಳ್ಳವನು.

**ಸುರಕ್ತಪದ್ಮಲೋಚನಃ ಸುವಿದ್ಯುದಾಭಕುಂಡಲಃ ।**
**ಸುಹಾಸವಿದ್ರುಮಾಧರಃ ಸಮಸ್ತ ವೇದವಾಗ್ರಸಃ ॥ ೨ ॥**

ಕೆಂಪುಕಮಲದಳದಂತೆ ಕಣ್ಣುಗಳುಳ್ಳವನು, ಮಿಂಚಿನಂತೆ ಬೆಳಗುವ ಕರ್ಣಾಭರಣಗಳುಳ್ಳವನು. ಮಂದಹಾಸದಿಂದ ಕೂಡಿದ ಹವಳದಂಥ ತುಟಿಯುಳ್ಳವನು. ಸಮಗ್ರ ವೇದವಾಕ್ಯಗಳಿಂದ ಮುಖ್ಯ ಪ್ರತಿಪಾದ್ಯನು.

**ದಿವಾಕರೌಘಕೌಸ್ತುಭಪ್ರಭಾಸಕೋರುಕಂಧರಃ ।**
**ಸುಪೀವರೋನ್ನತೋರುಸಜ್ಜಗದ್ಧರಾಂಸಯುಗ್ಮಕಃ ॥ ೩ ॥**

ಅನಂತಸೂರ್ಯರ ಕಾಂತಿಯುಳ್ಳ ಕೌಸ್ತುಭಮಣಿಗೂ ಪ್ರಭೆಯನ್ನಿತ್ತ ಶ್ರೇಷ್ಠ ಕಂಠವುಳ್ಳವನು. ಸತ್ಯವಾದ ಜಗತ್ತಿನ ಭಾರವನ್ನು ಹೊತ್ತ, ದಷ್ಟ-ಪುಷ್ಟವಾದ, ಎತ್ತರವಾದ ಹೆಗಲುಗಳೆರಡುಳ್ಳವನು.

**ಸುವೃತ್ತದೀರ್ಘಪೀವರೋಲ್ಲಸದ್ಭುಜದ್ವಯಾಂಕಿತಃ ।**
**ಜಗದ್ವಿಮಥ್ಯ ಸಂಭೃತಃ ಶಿರೋಽಸ್ಯ ದಕ್ಷಿಣೇ ಕರೇ ॥ ೪ ॥**

ವೃತ್ತ-ದೀರ್ಘ-ಪುಷ್ಟವಾದ ಜಗದ್ರಕ್ಷಣೆಯಲ್ಲಿಯೇ ಮಗ್ನವಾದ ಭುಜಗಳುಳ್ಳವನು. ಜಗತ್ತಿನ ಸಾರದಿಂದ ನಿರ್ಮಿತವಾದ ಬಾಣವನ್ನು ಬಲಗೈಯಲ್ಲಿ ಧರಿಸಿದವನು.

**ಸ ವಾಮಬಾಹುನಾ ಧನುರ್ದಧಾರ ಶಾರ್ಙ್ಗಸಂಜ್ಞಿತಮ್ ।**

**ಉದಾರಬಾಹುಭೂಷಣಃ ಶುಭಾಂಗದಃ ಸಕಂಕಣಃ ।**
**ಮಹಾಂಗುಲೀಯಭೂಷಿತಃ ಸುರಕ್ತಸತ್ಕರಾಂಬುಜಃ ॥ ೫ ॥**

ಶಾರ್ಙ್ಗ ಎಂದು ಹೆಸರುಳ್ಳ ಧನುಸ್ಸನ್ನು ಎಡಗೈಯಲ್ಲಿ ಧರಿಸಿದವನು. ಭುಜಾಭರಣ– ಮೊಣಕೈ ಭೂಷಣವಾದ ಅಂಗದ–ಕಂಕಣ–ಶ್ರೇಷ್ಠ ಉಂಗುರಗಳಿಂದ ಅಲಂಕೃತವಾದ ಕೈಗಳುಳ್ಳವನು. ಕಮಲದಂತೆ ಕೆಂಪಾದ ಅಂಗೈಯುಳ್ಳವನು.

**ಅನರ್ಘ್ಯರತ್ನಮಾಲಯಾ ವನಾಖ್ಯಯಾ ಚ ಮಾಲಯಾ ।**
**ವಿಲಾಸಿವಿಸ್ತೃತೋರಸಾ ಬಭಾರ ಚ ಶ್ರಿಯಂ ಪ್ರಭುಃ ॥ ೬ ॥**

ಅಮೂಲ್ಯವಾದ ರತ್ನಮಾಲೆ ಹಾಗೂ ವನಮಾಲೆಗಳಿಂದ ಶೋಭಿಸುವ ಅಗಲವಾದ ಎದೆಯಲ್ಲಿ ಲಕ್ಷ್ಮೀದೇವಿಯನ್ನು ಧರಿಸಿರುವನು. ಸರ್ವದಲ್ಲೂ ಸಮರ್ಥನು.

**ಸ ಭೂತಿವತ್ಸಭೂಷಣಸ್ತನೂದರೇ ವಲಿತ್ರಯೀ ।**
**ಉದಾರಮಧ್ಯಭೂಷಣೋ ಲಸತ್ತಟಿತ್ಪ್ರಭಾಂಬರಃ ॥ ೭ ॥**

ಎದೆಯಲ್ಲಿ ಶ್ರೀವತ್ಸಚಿಹ್ನೆಯನ್ನು ಧರಿಸಿದವನು. ಕೃಶವಾದ ಹೊಟ್ಟೆಯಲ್ಲೂ ವಲಿತ್ರಯಗಳನ್ನು ಹೊಂದಿದವನು. ಶ್ರೇಷ್ಠವಾದ ಸೊಂಟಪಟ್ಟಿ ಧರಿಸಿದವನು. ಮಿಂಚಿನಂತೆ ಹೊಳೆಯುವ ಪೀತಾಂಬರವನ್ನು ಧರಿಸಿದವನು.

**ಕರೀಂದ್ರಸತ್ಕರೋರುಯುಕ್ ಸುವೃತ್ತಜಾನುಮಂಡಲಃ ।**
**ಕ್ರಮಾಲ್ಪವೃತ್ತಜಂಘಕಃ ಸುರಕ್ತಪಾದಪಲ್ಲವಃ ॥ ೮ ॥**

ಆನೆಯ ಸೊಂಡಿಲಿನಂತಹ ತೊಡೆಗಳುಳ್ಳವನು. ವೃತ್ತವಾದ ಮೊಣಕಾಲುಗಳುಳ್ಳವನು. ಕ್ರಮೇಣ ತೆಳ್ಳಗಾಗುವ ಉರುಟಾದ ಜಂಘವುಳ್ಳವನು. ಚಿಗುರೆಲೆಯಂತೆ ಕೆಂಪಾದ ಪಾದಯುಗ್ಮಗಳುಳ್ಳವನು.

**ಲಸದ್ಧರಿನ್ಮಣಿದ್ಯುತೀ ರರಾಜ ರಾಘವೋಧಿಕಮ್ ।**
**ಅಸಂಖ್ಯಸತ್ಸುಖಾರ್ಣವಃ ಸಮಸ್ತಶಕ್ತಿಸತ್ತನುಃ ॥ ೯ ॥**

ಹೊಳೆವ ಇಂದ್ರನೀಲಮಣಿಯಂತೆ ದೇಹದ ಕಾಂತಿಯುಳ್ಳ ಶ್ರೀರಾಮನು ಅಗಣಿತ ಸದಾನಂದಸಾಗರನೂ, ಸಕಲಸಾಮರ್ಥ್ಯವೇ ದೇಹವಾಗುಳ್ಳವನಾಗಿ ಉತ್ಕೃಷ್ಟನಾಗಿ ಶೋಭಿಸಿದನು.

**ಜ್ಞಾನಂ ನೇತ್ರಾಬ್ಜಯುಗ್ಮಾತ್ ಮುಖವರಕಮಲಾತ್ ಸರ್ವವೇದಾರ್ಥಸಾರಾನ್**
**ತನ್ವಾ ಬ್ರಹ್ಮಾಂಡಬಾಹ್ಯಾಂತರಮಧಿಕರುಚಾ ಭಾಸಯನ್ ಭಾಸುರಾಸ್ಯಃ ।**
**ಸರ್ವಾಭೀಷ್ಟಾಭಯೇ ಚ ಸ್ವಕರವರಯುಗೇನಾಽರ್ಥಿನಾಮಾದಧಾನಃ**
**ಪ್ರಾಯಾದ್ದೇವಾಧಿದೇವಃ ಸ್ವಪದಮಭಿಮುಖಶ್ಚೋತ್ತರಾಶಾಂ ವಿಶೋಕಾಮ್॥ ೧೦ ॥**

ತನ್ನೆರಡು ಕಣ್ಣುಗಳಿಂದ ಜ್ಞಾನವನ್ನೂ, ವದನಾರವಿಂದದಿಂದ ಸರ್ವಶ್ರುತ್ಯರ್ಥ ಸಾರವನ್ನು ಉಪದೇಶಿಸುತ್ತಾ, ತನ್ನ ಶರೀರಕಾಂತಿಯಿಂದ ಬ್ರಹ್ಮಾಂಡದ ಒಳ–ಹೊರಗೆ ಬೆಳಗಿಸುತ್ತಾ, ಭಜಕರಿಗೆ ತನ್ನ ಕರಯುಗಳಗಳಿಂದ ವರಾಭಯಗಳನ್ನು ನೀಡುತ್ತಾ, ಸರ್ವೋತ್ತಮನಾದ ಶೋಭಿಸುವ ಮುಖಕಮಲಗಳುಳ್ಳ ಶ್ರೀರಾಮ ಚಂದ್ರನು ದುಃಖರಹಿವಾದ ಉತ್ತರದಿಕ್ಕಿಗೆ ಅಭಿಮುಖನಾಗಿ ಪರಂಧಾಮಕ್ಕೆ ತೆರಳಿದನು.

**ದಧ್ರೇ ಛತ್ರಂ ಹನೂಮಾನ್ ಸ್ರವದಮೃತಮಯಂ ಪೂರ್ಣಚಂದ್ರಾಯುತಾಭಂ**
**ಸೀತಾ ಸೈವಾಖಿಲಾಕ್ಷ್ಣಾಂ ವಿಷಯಮುಪಗತಾ ಶ್ರೀರಥ ಹ್ರೀರಥೈಕಾ ।**
**ದ್ವೇಧಾ ಭೂತ್ವಾ ದುಧಾವ ವ್ಯಜನಮುಭಯತಃ ಪೂರ್ಣಚಂದ್ರಾಂಶುಗೌರಂ**
**ಪ್ರೋದ್ಯದ್ಭಾಸ್ವತ್ ಪ್ರಭಾಭಾ ಸಕಲಗುಣತನುರ್ಭೂಷಿತಾ ಭೂಷಣೈಃ ಸ್ವೈಃ ॥ ೧೧ ॥**

ರಾಮನು ಪರಂಧಾಮಕ್ಕೆ ತೆರಳುವಾಗ ಪರಿವಾರಸಹಿತನಾದ ರಾಮನನ್ನು ಚಿಂತಿಸುವ ಕ್ರಮವನ್ನು ಆಚಾರ್ಯರು ತಿಳಿಸಿದ ಬಗೆ: ಹನುಮಂತನು ಅಮೃತವನ್ನು ಧಾರೆ ಎರೆಯುತ್ತಿರುವ, ಸಾವಿರಾರು ಚಂದ್ರರ ಪ್ರಭೆಯುಳ್ಳ ಛತ್ರವನ್ನು ಧರಿಸಿದನು. ಅನಂತಗುಣಸ್ವರೂಪಳಾದ ಸ್ವರೂಪಭೂತಗಳಾದ ಆಭರಣಗಳಿಂದ, ಉದಯಿಸುವ ಸೂರ್ಯನಂತೆ ಶೋಭಿಸುವ ಲಕ್ಷ್ಮಿಯು ಶ್ರೀ–ಹ್ರೀ ಎಂಬ ಎರಡು ರೂಪಗಳನ್ನು ಧರಿಸಿ, ಪೂರ್ಣಚಂದ್ರನಂತೆ ಬಿಳಿಯಾದ ವ್ಯಜನಗಳನ್ನು ಇಕ್ಕೆಲದಲ್ಲೂ ಬೀಸುತ್ತಿರುವವಳಾಗಿ ಜಗತ್ತಿನ ದೃಷ್ಟಿಗೆ ಗೋಚರಿಸಿದಳು.

**ಸಾಕ್ಷಾಚ್ಚಕ್ರತನುಸ್ತಥೈವ ಭರತಶ್ಚಕ್ರಂ ದಧದ್ದಕ್ಷಿಣೇ–**
**ನಾಯಾತ್ ಸವ್ಯತ ಏವ ಶಂಖವರಭೃಚ್ಛಂಖಾತ್ಮಕಃ ಶತ್ರುಹಾ ।**
**ಅಗ್ರೇ ಬ್ರಹ್ಮಪುರೋಗಮಾಃ ಸುರಗಣಾ ವೇದಾಶ್ಚ ಸೋಽಂಕಾರಕಾಃ**
**ಪಶ್ಚಾತ್ ಸರ್ವಜಗಜ್ಜಗಾಮ ರಘುಪಂ ಯಾಂತಂ ನಿಜಂ ಧಾಮ ತಮ್ ॥ ೧೨ ॥**

ಚಕ್ರಾಭಿಮಾನಿಯಾದ ಭರತನು ರಾಮನ ಬಲಬದಿಯಲ್ಲಿ ಸಾಕ್ಷಾತ್ತಾಗಿ ಚಕ್ರವನ್ನು ಧರಿಸಿಕೊಂಡು ಶಂಖಾಭಿಮಾನಿಯಾದ ಶತ್ರುಘ್ನನು ಎಡಬದಿಯಲ್ಲಿ ಶಂಖವನ್ನು

ಹಿಡಿದುಕೊಂಡು ನಡೆದರು. ರಾಮನ ಮುಂಭಾಗದಲ್ಲಿ ಚತುರ್ಮುಖನನ್ನು ಆರಂಭಿಸಿ ಎಲ್ಲ ದೇವತಾಸಮೂಹವು, ಓಂಕಾರಸಹಿತವಾದ ವೇದವನ್ನು ಉಚ್ಚರಿಸುತ್ತಾ ಮುನ್ನಡೆಯಿತು. ರಾಮನ ಹಿಂಭಾಗದಿಂದ ಸಕಲಸಜ್ಜನಸಮೂಹವೂ ವೈಕುಂಠದೆಡೆಗೆ ನಡೆಯುತ್ತಿರುವ ರಾಮನನ್ನು ಹಿಂಬಾಲಿಸಿತು.

**ತಸ್ಯ ಸೂರ್ಯಸುತಪೂರ್ವವಾನರಾ ದಕ್ಷಿಣೇನ ಮನುಜಾಸ್ತು ಸವ್ಯತಃ ।**
**ರಾಮಜನ್ಮಚರಿತಾನಿ ತಸ್ಯ ತೇ ಕೀರ್ತಯಂತ ಉಚ್ಚೈರ್ದ್ರುತಂ ಯಯುಃ ॥ ೧೩ ॥**

ಸುಗ್ರೀವನೇ ಮೊದಲಾದ ಎಲ್ಲಾ ಕಪಿಗಳು ಬಲಭಾಗದಲ್ಲೂ ಸಾತ್ತ್ವಿಕ ಮನುಷ್ಯರು ಎಡಭಾಗದಲ್ಲೂ, ರಾಮನ ಅವತಾರದ ಮಹಿಮೆಗಳನ್ನು ಗಟ್ಟಿಯಾಗಿ ಗಾನ ಮಾಡುತ್ತಾ ಶ್ರೀರಾಮನನ್ನು ಅನುಸರಿಸಿದರು.

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಹನುಮದಂತರ್ಗತಶ್ರೀರಾಮಚಂದ್ರಃ ಪ್ರೀಯತಾಮ್ ॥

## ಶ್ರೀರಘುಪ್ರವೀರತೀರ್ಥವಿರಚಿತಂ

# ಶ್ರೀಹನೂಮದಷ್ಟೋತ್ತರಶತನಾಮಸ್ತೋತ್ರಮ್

ಯಸ್ಯ ಸಂಸ್ಮರಣಾದೇವ ಪುರುಷಾರ್ಥಚತುಷ್ಟಯಮ್ ।
ಲಭ್ಯತೇ ಶ್ರೀಹನುಮತೇ ನಮಸ್ತಸ್ಮೈ ಮಹಾತ್ಮನೇ ॥ ೧ ॥

ಹನೂಮಾನ್ ವಾಯುತನಯಃ ಕೇಸರಿಪ್ರಿಯನಂದನಃ ।
ಅಂಜನಾನಂದನಃ ಶ್ರೀಮಾನ್ ಪಿಂಗಾಕ್ಷೋಽಮಿತವಿಕ್ರಮಃ ॥ ೨ ॥

ಸರ್ವಲಕ್ಷಣಸಂಪನ್ನಃ ಕಲ್ಯಾಣಗುಣವಾರಿಧಿಃ ।
ಸ್ವರ್ಣವರ್ಣೋ ಮಹಾಕಾಯೋ ಮಹಾವೀರ್ಯೋ ಮಹಾದ್ಯುತಿಃ ॥ ೩ ॥

ಮಹಾಬಲೋ ಮಹೌದಾರ್ಯಃ ಸುಗ್ರೀವಾಭೀಷ್ಟದಾಯಕಃ ।
ರಾಮದಾಸಾಗ್ರಣೀರ್ಭಕ್ತಮನೋರಥಸುರದ್ರುಮಃ ॥ ೪ ॥

ಅರಿಷ್ಟಧ್ವಾಂತತರಣಿಃ ಸರ್ವದೋಷವಿವರ್ಜಿತಃ ।
ಗೋಷ್ಪದೀಕೃತವಾರಾಶಿಃ ಸೀತಾದರ್ಶನಲಾಲಸಃ ॥ ೫ ॥

ದೇವರ್ಷಿಸಂಸ್ತುತಶ್ಚಿತ್ರಕರ್ಮಾ ಜಿತಖಗೇಶ್ವರಃ ।
ಮನೋಜವೋ ವಾಯುಜವೋ ಭಗವಾನ್ ಪ್ಲವಗರ್ಷಭಃ ॥ ೬ ॥

ಸುರಪ್ರಸೂನಾಭಿವೃಷ್ಟಃ ಸಿದ್ಧಗಂಧರ್ವಸೇವಿತಃ ।
ದಶಯೋಜನವಿಸ್ತೀರ್ಣಕಾಯವಾನಂಬರಾಶ್ರಯಃ ॥ ೭ ॥

ಮಹಾಯೋಗೀ ಮಹೋತ್ಸಾಹೋ ಮಹಾಬಾಹುಃ ಪ್ರತಾಪವಾನ್ ।
ರಾಮದ್ವೇಷಿಜನಾಸಹ್ಯಃ ಸಜ್ಜನಪ್ರಿಯದರ್ಶನಃ ॥ ೮ ॥

ರಾಮಾಂಗುಲೀಯವಾನ್ ಸರ್ವಶ್ರಮಹೀನೋ ಜಗತ್ಪತಿಃ ।
ಮೈನಾಕವಿಪ್ರಿಯಃ ಸಿಂಧುಸಂಸ್ತುತಃ ಕದ್ರುರಕ್ಷಕಃ ॥ ೯ ॥

ದೇವಮಾನಪ್ರದಃ ಸಾಧುಃ ಸಿಂಹಿಕಾವಧಪಂಡಿತಃ ।
ಲಂಕಿನ್ಯಭಯದಾತಾ ಚ ಸೀತಾಶೋಕವಿನಾಶನಃ ॥ ೧೦ ॥

ಜಾನಕೀಪ್ರಿಯಸಲ್ಲಾಪಃ ಚೂಡಾಮಣಿಧರಃ ಕಪಿಃ ।
ದಶಾನನವರಚ್ಛೇತ್ತಾ ಮಶಕೀಕೃತರಾಕ್ಷಸಃ ॥ ೧೧ ॥

ಲಂಕಾಭಯಂಕರಃ ಸಪ್ತಮಂತ್ರಿಪುತ್ರವಿನಾಶನಃ ।
ದುರ್ಧರ್ಷಪ್ರಾಣಹರ್ತಾ ಚ ಯೂಪಾಕ್ಷವಧಕಾರಕಃ ॥ ೧೨ ॥

ವಿರೂಪಾಕ್ಷಾಂತಕಾರೀ ಚ ಭಾಸಕರ್ಣಶಿರೋಹರಃ ।
ಪ್ರಘಸಪ್ರಾಣಹರ್ತಾ ಚ ತೃತೀಯಾಂಶವಿನಾಶನಃ ॥ ೧೩ ॥

ಅಕ್ಷರಾಕ್ಷಸಸಂಹಾರೀ ತೃಣೀಕೃತದಶಾನನಃ ।
ಸ್ವಪುಚ್ಛಗಾಗ್ನಿನಿರ್ದಗ್ಧಲಂಕಾಪುರವರೋಽವ್ಯಯಃ ॥ ೧೪ ॥

ಆನಂದವಾರಿಧಿರ್ಧನ್ಯೋ ಮೇಘಗಂಭೀರನಿಃಸ್ವನಃ ।
ಕಪಿಪ್ರವೀರಸಂಪೂಜ್ಯೋ ಮಧುಭಕ್ಷಣತತ್ಪರಃ ॥ ೧೫ ॥

ರಾಮಬಾಹುಸಮಾಶ್ಲಿಷ್ಟಃ ಭವಿಷ್ಯಚ್ಚತುರಾನನಃ ।
ಸತ್ಯಲೋಕೇಶ್ವರಃ ಪ್ರಾಜ್ಞೋ ವಿಭೀಷಣವರಪ್ರದಃ ॥ ೧೬ ॥

ಧೂಮ್ರಾಕ್ಷಪ್ರಾಣಹರ್ತಾ ಚ ಕಪಿಸೈನ್ಯವಿವರ್ಧನಃ ।
ತ್ರಿಶೀರ್ಷಾಂತಕ ಉನ್ಮತ್ತನಾಶನೋಽಕಂಪನಾಂತಕಃ ॥ ೧೭ ॥

ದೇವಾಂತಕಾಂತಕಃ ಶೂರೋ ಯುದ್ಧೋನ್ಮತ್ತವಿನಾಶಕಃ ।
ನಿಕುಂಭಾಂತಕರಃ ಶತ್ರುಸೂದನಃ ಸುರವೀಕ್ಷಿತಃ ॥ ೧೮ ॥

ದಶಾಸ್ಯಗರ್ವಹರ್ತಾ ಚ ಲಕ್ಷ್ಮಣಪ್ರಾಣದಾಯಕಃ ।
ಕುಂಭಕರ್ಣಜಯೀ ಶಕ್ರಶತ್ರುಗರ್ವಾಪಹಾರಕಃ ॥ ೧೯ ॥

ಸಂಜೀವನಾಚಲಾನೇತಾ ಮೃಗವಾನರಜೀವನಃ ।
ಜಾಂಬವತ್ಪ್ರಿಯಕೃದ್ವೀರಃ ಸುಗ್ರೀವಾಂಗದಸೇವಿತಃ ॥ ೨೦ ॥

ಭರತಪ್ರಿಯಸಲ್ಲಾಪಃ ಸೀತಾಹಾರವಿರಾಜಿತಃ ।
ರಾಮೇಷ್ಟಃ ಫಲ್ಗುನಸಖಃ ಶರಣ್ಯತ್ರಾಣತತ್ಪರಃ ॥ ೨೧ ॥

ಉತ್ಪತ್ತಿಸ್ಥಿತಿಸಂಹಾರಕರ್ತಾ ಕಿಂಪುರುಷಾಲಯಃ ।
ವೇದವೇದಾಂಗತತ್ತ್ವಜ್ಞೋ ಭವರೋಗಸ್ಯ ಭೇಷಜಃ ॥ ೨೨ ॥

ಇತ್ಥಂ ಹನುಮತಃ ಪುಣ್ಯಂ ಶತಮಷ್ಟೋತ್ತರಂ ಪಠನ್ ।
ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಮ್ ॥ ೨೩ ॥

ಕನ್ಯಾರ್ಥೀ ಲಭತೇ ಕನ್ಯಾಂ ಸುತಾರ್ಥೀ ಲಭತೇ ಸುತಮ್ ।
ಕೀರ್ತ್ಯರ್ಥೀ ಲಭತೇ ಕೀರ್ತಿಂ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ॥ ೨೪ ॥

ರೋಗಾರ್ತೋ ಮುಚ್ಯತೇ ರೋಗಾದ್‌ಬದ್ಧೋ ಮುಚ್ಯೇತ ಬಂಧನಾತ್ ।
ಇದಮಾಯುಷ್ಕರಂ ಧನ್ಯಂ ಸರ್ವೋಪದ್ರವನಾಶನಮ್ ॥ ೨೫ ॥

ಸರ್ವಶತ್ರುಕ್ಷಯಕರಂ ಸರ್ವಪಾಪಪ್ರಣಾಶನಮ್ ।
ಸಮಸ್ತಯಜ್ಞಫಲದಂ ಸರ್ವತೀರ್ಥಫಲಪ್ರದಮ್ ॥ ೨೬ ॥

ಸಮಸ್ತವೇದಫಲದಂ ಸರ್ವದಾನಫಲಪ್ರದಮ್ ।
ಪಠನೀಯಂ ಮಹತ್ಪುಣ್ಯಂ ಸರ್ವಸಂಪತ್‌ಸಮೃದ್ಧಿದಮ್ ॥ ೨೭ ॥

ಏವಮಷ್ಟೋತ್ತರಶತಂ ನಾಮ್ನಾಂ ಹನುಮತೋ ಯತಿಃ ।
ರಘುಪ್ರವೀರಾಭಿಧಾನಃ ಕೃತವಾನ್ ವಾಂಛಿತಾರ್ಥದಮ್ ॥ ೨೮ ॥

॥ ಇತಿ ಹನೂಮದಷ್ಟೋತ್ತರಶತನಾಮಸ್ತೋತ್ರಮ್ ॥

* * *

# ಶ್ರೀಹನೂಮದಷ್ಟೋತ್ತರಶತನಾಮಾವಲೀ

ಶ್ರೀಹನೂಮತೇ ನಮಃ ।
ಶ್ರೀವಾಯುತನಯಾಯ ನಮಃ ।
ಶ್ರೀಕೇಸರಿಪ್ರಿಯನಂದನಾಯ ನಮಃ ।
ಶ್ರೀಅಂಜನಾನಂದನಾಯ ನಮಃ ।
ಶ್ರೀಶ್ರೀಮತೇ ನಮಃ ।
ಶ್ರೀಪಿಂಗಾಕ್ಷಾಯ ನಮಃ ।
ಶ್ರೀಅಮಿತವಿಕ್ರಮಾಯ ನಮಃ ।
ಶ್ರೀಸರ್ವಲಕ್ಷಣಸಂಪನ್ನಾಯ ನಮಃ ।
ಶ್ರೀಕಲ್ಯಾಣಗುಣವಾರಿಧಯೇ ನಮಃ ।
ಶ್ರೀಸ್ವರ್ಣವರ್ಣಾಯ ನಮಃ । ೧೦
ಶ್ರೀಮಹಾಕಾಯಾಯ ನಮಃ ।
ಶ್ರೀಮಹಾವೀರ್ಯಾಯ ನಮಃ ।
ಶ್ರೀಮಹಾದ್ಯುತಯೇ ನಮಃ ।
ಶ್ರೀಮಹಾಬಲಾಯ ನಮಃ ।

ಶ್ರೀಮಹೌದಾರ್ಯಾಯ ನಮಃ ।
ಶ್ರೀಸುಗ್ರೀವಾಭೀಷ್ಟದಾಯಕಾಯ ನಮಃ ।
ಶ್ರೀರಾಮದಾಸಾಗ್ರ್ಯೈ ನಮಃ ।
ಶ್ರೀಭಕ್ತಮನೋರಥಸುರದ್ರುಮಾಯ ನಮಃ ।
ಶ್ರೀಅರಿಷ್ಟಧ್ವಾಂತತರಣಯೇ ನಮಃ ।
ಶ್ರೀಸರ್ವದೋಷವಿವರ್ಜಿತಾಯ ನಮಃ । ೨೦
ಶ್ರೀಗೋಷ್ಪದೀಕೃತವಾರಾಶಯೇ ನಮಃ ।
ಶ್ರೀಸೀತಾದರ್ಶನಲಾಲಸಾಯ ನಮಃ ।
ಶ್ರೀದೇವರ್ಷಿಸಂಸ್ತುತಾಯ ನಮಃ ।
ಶ್ರೀಚಿತ್ರಕರ್ಮಣೇ ನಮಃ ।
ಶ್ರೀಜಿತಖಗೇಶ್ವರಾಯ ನಮಃ ।
ಶ್ರೀಮನೋಜವಾಯ ನಮಃ ।
ಶ್ರೀವಾಯುಜವಾಯ ನಮಃ ।
ಶ್ರೀಭಗವತೇ ನಮಃ ।
ಶ್ರೀಪ್ಲವಗರ್ಷಭಾಯ ನಮಃ ।
ಶ್ರೀಸುರಪ್ರಸೂನಾಭಿವೃಷ್ಟಾಯ ನಮಃ । ೩೦
ಶ್ರೀಸಿದ್ಧಗಂಧರ್ವಸೇವಿತಾಯ ನಮಃ ।
ಶ್ರೀದಶಯೋಜನವಿಸ್ತೀರ್ಣಕಾಯವತೇ ನಮಃ ।
ಶ್ರೀಅಂಬರಾಶ್ರಯಾಯ ನಮಃ ।
ಶ್ರೀಮಹಾಯೋಗಿನೇ ನಮಃ ।
ಶ್ರೀಮಹೋತ್ಸಾಹಾಯ ನಮಃ ।
ಶ್ರೀಮಹಾಬಾಹವೇ ನಮಃ ।
ಶ್ರೀಪ್ರತಾಪವತೇ ನಮಃ ।
ಶ್ರೀರಾಮದ್ವೇಷಿಜನಾಸಹ್ಯಾಯ ನಮಃ ।
ಶ್ರೀಸಜ್ಜನಪ್ರಿಯದರ್ಶನಾಯ ನಮಃ ।
ಶ್ರೀರಾಮಾಂಗುಲೀಯವತೇ ನಮಃ । ೪೦
ಶ್ರೀಸರ್ವಶ್ರಮಹೀನಾಯ ನಮಃ ।
ಶ್ರೀಜಗತ್ಪತಯೇ ನಮಃ ।
ಶ್ರೀಮೈನಾಕವಿಪ್ರಿಯಾಯ ನಮಃ ।
ಶ್ರೀಸಿಂಧುಸಂಸ್ತುತಾಯ ನಮಃ ।
ಶ್ರೀಕದ್ರುರಕ್ಷಕಾಯ ನಮಃ ।
ಶ್ರೀದೇವಮಾನಪ್ರದಾಯ ನಮಃ ।
ಶ್ರೀಸಾಧವೇ ನಮಃ ।
ಶ್ರೀಸಿಂಹಿಕಾವಧಪಂಡಿತಾಯ ನಮಃ ।
ಶ್ರೀಲಂಕಿನ್ಯಭಯದಾತ್ರೇ ನಮಃ ।
ಶ್ರೀಸೀತಾಶೋಕವಿನಾಶನಾಯ ನಮಃ । ೫೦
ಶ್ರೀಜಾನಕೀಪ್ರಿಯಸಲ್ಲಾಪಾಯ ನಮಃ ।
ಶ್ರೀಚೂಡಾಮಣಿಧರಾಯ ನಮಃ ।
ಶ್ರೀಕಪಯೇ ನಮಃ ।
ಶ್ರೀದಶಾನನವರಚ್ಛೇತ್ರೇ ನಮಃ ।
ಶ್ರೀಮಶಕೀಕೃತರಾಕ್ಷಸಾಯ ನಮಃ ।
ಶ್ರೀಲಂಕಾಭಯಂಕರಾಯ ನಮಃ ।
ಶ್ರೀಸಪ್ತಮಂತ್ರಿಪುತ್ರವಿನಾಶನಾಯ ನಮಃ ।
ಶ್ರೀದುರ್ಧರ್ಷಪ್ರಾಣಹರ್ತ್ರೇ ನಮಃ ।
ಶ್ರೀಯೂಪಾಕ್ಷವಧಕಾರಕಾಯ ನಮಃ ।
ಶ್ರೀವಿರೂಪಾಕ್ಷಾಂತಕಾರಿಣೇ ನಮಃ । ೬೦
ಶ್ರೀಭಾಸಕರ್ಣಶಿರೋಹರಾಯ ನಮಃ ।
ಶ್ರೀಪ್ರಘಸಪ್ರಾಣಹರ್ತ್ರೇ ನಮಃ ।
ಶ್ರೀತೃತೀಯಾಂಶವಿನಾಶನಾಯ ನಮಃ ।

ಶ್ರೀಅಕ್ಷರಾಕ್ಷಸಸಂಹಾರಿಣೇ ನಮಃ ।
ಶ್ರೀತೃಣೀಕೃತದಶಾನನಾಯ ನಮಃ ।
ಶ್ರೀಸ್ವಪುಚ್ಛಾಗ್ನಿನಿರ್ದಗ್ಧಲಂಕಾಪುರವರಾಯ ನಮಃ ।
ಶ್ರೀಅವ್ಯಯಾಯ ನಮಃ ।
ಶ್ರೀಆನಂದವಾರಿಧಯೇ ನಮಃ ।
ಶ್ರೀಧನ್ಯಾಯ ನಮಃ ।
ಶ್ರೀಮೇಘಗಂಭೀರನಿಃಸ್ವನಾಯ ನಮಃ । ೭೦
ಶ್ರೀಕಪಿಪ್ರವೀರಸಂಪೂಜ್ಯಾಯ ನಮಃ ।
ಶ್ರೀಮಧುಭಕ್ಷಣತತ್ಪರಾಯ ನಮಃ ।
ಶ್ರೀರಾಮಬಾಹುಸಮಾಶ್ಲಿಷ್ಟಾಯ ನಮಃ ।
ಶ್ರೀಭವಿಷ್ಯಚ್ಚತುರಾನನಾಯ ನಮಃ ।
ಶ್ರೀಸತ್ಯಲೋಕೇಶ್ವರಾಯ ನಮಃ ।
ಶ್ರೀಪ್ರಾಣಾಯ ನಮಃ ।
ಶ್ರೀವಿಭೀಷಣವರಪ್ರದಾಯ ನಮಃ ।
ಶ್ರೀಧೂಮ್ರಾಕ್ಷಪ್ರಾಣಹರ್ತ್ರೇ ನಮಃ ।
ಶ್ರೀಕಪಿಸೈನ್ಯವಿವರ್ಧನಾಯ ನಮಃ ।
ಶ್ರೀತ್ರಿಶೀರ್ಷಾಂತಕಾಯ ನಮಃ । ೮೦
ಶ್ರೀಉನ್ಮತ್ತನಾಶನಾಯ ನಮಃ ।
ಶ್ರೀಅಕಂಪನಾಂತಕಾಯ ನಮಃ ।
ಶ್ರೀದೇವಾಂತಕಾಂತಕಾಯ ನಮಃ ।
ಶ್ರೀಶೂರಾಯ ನಮಃ ।
ಶ್ರೀಯುದ್ಧೋನ್ಮತ್ತವಿನಾಶಕಾಯ ನಮಃ ।
ಶ್ರೀನಿಕುಂಭಾಂತಕಾಯ ನಮಃ ।
ಶ್ರೀಶತ್ರುಸೂದನಾಯ ನಮಃ ।
ಶ್ರೀಸುರವೀಕ್ಷಿತಾಯ ನಮಃ ।
ಶ್ರೀದಶಾಸ್ಯಗರ್ವಹರ್ತ್ರೇ ನಮಃ ।
ಶ್ರೀಲಕ್ಷ್ಮಣಪ್ರಾಣದಾಯಕಾಯ ನಮಃ । ೯೦
ಶ್ರೀಕುಂಭಕರ್ಣಜಯಿನೇ ನಮಃ ।
ಶ್ರೀಶಕ್ರಶತ್ರುಗರ್ವಾಪಹಾರಕಾಯ ನಮಃ ।
ಶ್ರೀಸಂಜೀವನಾಚಲಾನೇತ್ರೇ ನಮಃ ।
ಶ್ರೀಮೃಗವಾನರಜೀವನಾಯ ನಮಃ ।
ಶ್ರೀಜಾಂಬವತ್ಪ್ರಿಯಕೃತೇ ನಮಃ ।
ಶ್ರೀವೀರಾಯ ನಮಃ ।
ಶ್ರೀಸುಗ್ರೀವಾಂಗದಸೇವಿತಾಯ ನಮಃ ।
ಶ್ರೀಭರತಪ್ರಿಯಸಲ್ಲಾಪಾಯ ನಮಃ ।
ಶ್ರೀಸೀತಾಹಾರವಿರಾಜಿತಾಯ ನಮಃ ।
ಶ್ರೀರಾಮೇಷ್ಟಾಯ ನಮಃ । ೧೦೦
ಶ್ರೀಫಲ್ಗುನಸಖಾಯ ನಮಃ ।
ಶ್ರೀಶರಣ್ಯತ್ರಾಣತತ್ಪರಾಯ ನಮಃ ।
ಶ್ರೀಉತ್ಪತ್ತಿಕರ್ತ್ರೇ ನಮಃ ।
ಶ್ರೀಸ್ಥಿತಿಕರ್ತ್ರೇ ನಮಃ ।
ಶ್ರೀಸಂಹಾರಕರ್ತ್ರೇ ನಮಃ ।
ಶ್ರೀಕಿಂಪುರುಷಾಲಯಾಯ ನಮಃ ।
ಶ್ರೀವೇದವೇದಾಂಗತತ್ತ್ವಜ್ಞಾಯ ನಮಃ ।
ಶ್ರೀಭವರೋಗಸ್ಯ ಭೇಷಜಾಯ ನಮಃ । ೧೦೮

॥ ಶ್ರೀಕೃಷ್ಣಾರ್ಪಣಮಸ್ತು ॥

* * *

# ಶ್ರೀಹನೂಮದಷ್ಟೋತ್ತರಶತನಾಮಾವಲೀ

೧. **ಹನೂಮಾನ್** – ಉತ್ಕೃಷ್ಟವಾದ ಜ್ಞಾನವುಳ್ಳವನು. ಹನು=ಉತ್ತಮವಾದ ಜ್ಞಾನ; ಅದರಿಂದ ಪೂರ್ಣನಾದುದರಿಂದ ಹನೂಮಾನ್.

೨. **ವಾಯುತನಯಃ** – ಜೀವೋತ್ತಮರಾದ ವಾಯುದೇವರ ಮಗ ವಾಯುದೇವರ ಮೂಲರೂಪದ ದೇಹದಿಂದ ಬಂದ ರೂಪವಾದ್ದರಿಂದ ವಾಯುವಿನ ಮಗನಾದವನು.

೩. **ಕೇಸರಿಪ್ರಿಯನಂದನಃ** – ಕೇಸರಿಗೆ ಇಷ್ಟವಾದ ಆನಂದವನ್ನು ತನ್ನ ಶ್ರೇಷ್ಠ ಕಾರ್ಯಗಳಿಂದ ಕೊಟ್ಟವನು.

೪. **ಅಂಜನಾನಂದನಃ** – ತಾಯಿಯಾದ ಅಂಜನಾದೇವಿಗೆ ನಿಜವಾದ ಆನಂದವನ್ನು ಉಣಿಸಿದವನು; ನಿಜವಾದ ನಂದನನಾದವನು.

೫. **ಶ್ರೀಮಾನ್** – ಜ್ಞಾನಬಲ ಮತ್ತು ಭುಜಬಲಗಳಿಂದ ತುಂಬಿದವನು.

೬. **ಪಿಂಗಾಕ್ಷಃ** – ಪಿಂಗಳವರ್ಣದ ಕಣ್ಣುಗಳುಳ್ಳವನು; ಕಪಿಶ್ರೇಷ್ಠನು.

೭. **ಅಮಿತವಿಕ್ರಮಃ** – ಎಲ್ಲೆ ಇಲ್ಲದ ಪರಾಕ್ರಮವುಳ್ಳವನು; ಮಿತಿ ಇಲ್ಲದ ವಿಶಿಷ್ಟವಾದ ವೇದಾರ್ಥಜ್ಞಾನವುಳ್ಳವನು.

೮. **ಸರ್ವಲಕ್ಷಣಸಂಪನ್ನಃ** – ಸಕಲ ದೈಹಿಕ ಮತ್ತು ಅಧ್ಯಾತ್ಮಲಕ್ಷಣಗಳಿಂದ ಪೂರ್ಣನು. ಪ್ರಸಿದ್ಧವಾದ ೩೨ ದೈಹಿಕಲಕ್ಷಣಗಳಿಂದ ಕೂಡಿ ಎಲ್ಲಾ ದೇವತೆಗಳಿಂದ ಶ್ರೇಷ್ಠನಾದವನು.

೯. **ಕಲ್ಯಾಣಗುಣವಾರಿಧಿಃ** – ಮಂಗಲಕರಗಳಾದ ಅನೇಕ ಗುಣಗಳಿಂದ ಸಮುದ್ರದಂತೆ ಇರುವವನು.

೧೦. **ಸ್ವರ್ಣವರ್ಣಃ** – ಬಂಗಾರದ ಮೈಬಣ್ಣವುಳ್ಳವನು. ಪೂರ್ಣನಾದ 'ಸ್ವ' ಶಬ್ದವಾಚ್ಯನಾದ ನಾರಾಯಣನನ್ನು ಸದಾ ಸ್ತುತಿ ಮಾಡುತ್ತಿರುವವನು.

೧೧. **ಮಹಾಕಾಯಃ** – ಮಹತ್ತರ ದೇಹವುಳ್ಳವನು. ಕೇವಲ ಮೋಕ್ಷಸುಖವನ್ನೇ ಬಯಸದೆ ದೇವರನ್ನು ಮಾತ್ರ ಬಯಸುವವನು ಆದ್ದರಿಂದ ಸಕಲ ಪೂಜ್ಯನಾದವನು.

೧೨. **ಮಹಾವೀರ್ಯಃ** – ಮಹತ್ತಾದ ವೀರ್ಯ ಎಂಬ ಗುಣವುಳ್ಳವನು. 'ಆರಬ್ಧಾಂತ ಗಾಮಿತ್ವಂ ವೀರ್ಯಂ' ಆರಂಭ ಮಾಡಿದ ಕಾರ್ಯವನ್ನು ಅಚ್ಚುಕಟ್ಟಾಗಿ ಕೊನೆಗೊಳಿಸುವವರಲ್ಲಿ ಅಗ್ರಗಣ್ಯ. ಅದಕ್ಕೆ ಉದಾಹರಣೆ ಸುಂದರಕಾಂಡ.

೧೩. **ಮಹಾದ್ಯುತಿಃ** – ಶ್ರೇಷ್ಠವಾದ ದೈಹಿಕ ಕಾಂತಿಯುಳ್ಳವನು. ತನ್ನ ಕಾಂತಿಯಿಂದ ಸಜ್ಜನರಿಗೆ ಕೊನೆಗೆ ಒಳಗಿಂದ ದೇವರನ್ನು ತೋರಿಸುವವನು.

೧೪. **ಮಹಾಬಲಃ** – ಶ್ರೇಷ್ಠವಾದ, ಉತ್ತಮವಾದ ಭುಜಬಲದಿಂದ ಕೂಡಿದವನು.

೧೫. **ಮಹೌದಾರ್ಯಃ** – ಉತ್ಕೃಷ್ಟವಾದ ಔದಾರ್ಯ ಉಳ್ಳವನು. ಭಗವದ್ಭಕ್ತರಿಗೆ ಎಲ್ಲಾ ಕಾರ್ಯಗಳಲ್ಲಿ ಔದಾರ್ಯವನ್ನು ತೋರಿಸುವವನು.

೧೬. **ಸುಗ್ರೀವಾಭೀಷ್ಟದಾಯಕಃ** – ಸುಗ್ರೀವನಿಗೆ ಬೇಕಾದ, ಅಭೀಷ್ಟವಾದ ರಾಜ್ಯವನ್ನೂ, ಶ್ರೀರಾಮನ ಪ್ರಸಾದವನ್ನೂ ಕೊಡಿಸಿದವನು.

೧೭. **ರಾಮದಾಸಾಗ್ರಣೀಃ** – ಶ್ರೀರಾಮನಿಗೆ ದಾಸರು ಅನೇಕರು. ಆದರೂ ಅವರಲ್ಲಿ ಶ್ರೀರಾಮನು 'ನನ್ನ ದಾಸ' ಎಂದು ಸ್ವೀಕರಿಸಿದವರಲ್ಲಿ ಮೊದಲಿಗನು– ಹನುಮಂತ.

೧೮. **ಭಕ್ತಮನೋರಥಸುರದ್ರುಮಃ** – ಭಕ್ತರಿಗೆ ಅಭೀಷ್ಟವನ್ನು ಕೊಡುವುದರಲ್ಲಿ ಕಲ್ಪವೃಕ್ಷದಂತೆ ಇರುವವನು.

೧೯. **ಅರಿಷ್ಟಧ್ವಾಂತತರಣಿಃ** – ಅರಿಷ್ಟವೆಂಬ ಕತ್ತಲೆಯನ್ನು ನಾಶಮಾಡುವ ವಿಷಯದಲ್ಲಿ ಸೂರ್ಯನಂತಿರುವವನು.

೨೦. **ಸರ್ವದೋಷವಿವರ್ಜಿತಃ** – ಯಾವುದೇ ರೀತಿಯಾದ ದೋಷದಿಂದ ರಹಿತನಾದವನು. ದೊಡ್ಡ ದೋಷವಾದ ಕಲಿ ಆವೇಶದಿಂದ ರಹಿತನಾದವನು.

೨೧. **ಗೋಷ್ಪದೀಕೃತವಾರಾಶಿಃ** – ನೂರು ಯೋಜನ ವಿಸ್ತೀರ್ಣವಾದ ಸಮುದ್ರವನ್ನು ಗೋಪಾದದಂತೆ ಮಾಡಿದವನು. ಲೀಲಾಜಾಲವಾಗಿ ದಾಟಿದವನು.

೨೨. **ಸೀತಾದರ್ಶನಲಾಲಸಃ** – ಜಗನ್ಮಾತೆಯಾದ ಸೀತಾದೇವಿಯನ್ನು ನೋಡಲು ಉತ್ಸುಕನಾದವನು. ಸೀತಾದೇವಿಯಿಂದ ಅಭಿಮನ್ಯಮಾನವಾದ ವೇದಶಾಸ್ತ್ರಗಳಲ್ಲಿ ವಿಹರಿಸಲು ಉತ್ಸುಕನಾದವನು.

೨೩. **ದೇವರ್ಷಿಸಂಸ್ತುತಃ** – ದೇವತೆಗಳಿಂದ, ಋಷಿಗಳಿಂದ ಸ್ತುತಿಸಲ್ಪಟ್ಟವನು.

೨೪. **ಚಿತ್ರಕರ್ಮಾ** – ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವ ಕಾರ್ಯವನ್ನು ಮಾಡುವವನು.

೨೫. **ಜಿತಖಗೇಶ್ವರಃ** – ವೇಗದಲ್ಲಿ ಗರುಡನನ್ನೂ ಗೆದ್ದವನು. ಆದ್ದರಿಂದ ಶ್ರೀರಾಮನ ಮುಖ್ಯವಾಹನನಾದವನು. 'ವರದೋ ವಾಯುವಾಹನಃ'

೨೬. **ಮನೋಜವಃ** – ಮನಸ್ಸಿನ ವೇಗವನ್ನೂ ಮೀರಿಸುವ ವೇಗವುಳ್ಳವನು.

೨೭. **ವಾಯುಜವಃ** – ಗಾಳಿಯಂತೆ ಶೀಘ್ರಗಾಮಿಯಾದವನು.

೨೮. **ಭಗವಾನ್** – ಲಕ್ಷ್ಮೀದೇವಿಯ ಅನಂತರ ಐಶ್ವರ್ಯಾದಿ ಶ್ರೇಷ್ಠವಾದ ಆರು ಗುಣಗಳು ಪೂರ್ಣವಾಗಿ ಉಳ್ಳವನು. ಪರಮಪೂಜ್ಯನು.

೨೯. **ಪ್ಲವಗರ್ಷಭಃ** – ಹಾರುವವರಲ್ಲಿ ಶ್ರೇಷ್ಠನಾದವನು. ಕಪಿಸೈನ್ಯದಲ್ಲಿ ಶ್ರೇಷ್ಠನಾದವನು. ಹಾರುವವನು ಎಂದರೆ ದೇವರನ್ನು ತಿಳಿದವನು. ಅಂಥವರಲ್ಲಿ ಉತ್ತಮನು.

೩೦. **ಸುರಪ್ರಸೂನಾಭಿವೃಷ್ಟಃ** – ದೇವತೆಗಳಿಂದ ಪುಷ್ಪವೃಷ್ಟಿಯನ್ನು ಮಾಡಿಸಿಕೊಂಡವನು, ಪೂಜ್ಯನು.

೩೧. **ಸಿದ್ಧಗಂಧರ್ವಸೇವಿತಃ** – ಸಿದ್ಧರು, ಗಂಧರ್ವಾದಿಗಳಿಂದ ಸದಾ ಭಜಿಸಲ್ಪಡುವವನು.

೩೨. **ದಶಯೋಜನವಿಸ್ತೀರ್ಣಕಾಯವಾನ್** – ಹತ್ತು ಯೋಜನದಷ್ಟು ದೀರ್ಘವಾದ ದೇಹವುಳ್ಳವನು. ಪರಿಪೂರ್ಣ ಜ್ಞಾನದೇಹವುಳ್ಳವನು.

೩೩. **ಅಂಬರಾಶ್ರಯಃ** – ಆಕಾಶವೇ, ಅವಕಾಶವೇ ಆಶ್ರಯವಾಗಿ ಉಳ್ಳವನು; ದಹರಾಕಾಶಾಶ್ರಯ. ಎಲ್ಲರ ಹೃದಯಾಕಾಶ ಆಶ್ರಯವಾಗಿರುವವನು.

೩೪. **ಮಹಾಯೋಗೀ** – ಉತ್ತಮವಾದ ಉಪಾಯ ಮತ್ತು ದೇವರ–ಜೀವರ ಸಂಬಂಧವುಳ್ಳವನು; ದೇವರಿಗೆ ಯೋಗ್ಯಜೀವರಿಗೆ ಸಂಬಂಧವನ್ನು ಕಲ್ಪಿಸುವವನು.

೩೫. **ಮಹೋತ್ಸಾಹಃ** – ದೇವರ ವಿಷಯದಲ್ಲಿ ಉತ್ಕೃಷ್ಟವಾದ ಉತ್ಸಾಹವುಳ್ಳವನು. ಸದಾ ದೇವರನ್ನೂ ಕಂಡು ಸ್ತುತಿಸುವ ಮಹಾ ಉತ್ಸಾಹಿಗಳು. ಜಗತ್ತಿನ ಸಕಲ ಚೇಷ್ಟೆಗಳನ್ನು ತುಂಬಾ ಉತ್ಸಾಹದಿಂದ ದೇವರ ಪೂಜಾರೂಪವಾಗಿ ಮಾಡುವುದರಲ್ಲಿ ಉತ್ಸಾಹಿಗಳು.

೩೬. **ಮಹಾಬಾಹುಃ** – ಸಜ್ಜನರಿಗೆ ಯೋಗ್ಯವಾದ ವಸ್ತುಗಳನ್ನು ಹೊತ್ತು ತರುವವನು. ರಾಮಸೇವಾದೀಕ್ಷಾಬದ್ಧರಾದ ಕಪಿಗಳಿಗೆ ಮರಣ ಬಂದಾಗ ಸಂಜೀವಿನಿಯನ್ನು ತಂದು ಬದುಕಿಸಿದವನು. ಬದುಕಿದ ಅವರನ್ನು ರಾಮನ ಪಾದಕ್ಕೆ ಹಾಕುವವನು. ಆದ್ದರಿಂದ ಮಹಾಬಾಹುವು.

೩೭. **ಪ್ರತಾಪವಾನ್** – ಎದುರು ಇಲ್ಲದ ಬಲವುಳ್ಳವನು. ರಾವಣನನ್ನು ಹೆದರಿಸಿದ ಪ್ರತಾಪಿ.

೩೮. **ರಾಮದ್ವೇಷಿಜನಾಸಹ್ಯಃ** – ರಾಮನನ್ನು ದ್ವೇಷಮಾಡುವವರನ್ನು ಶಿಕ್ಷಿಸುವವನು. ರಾಮಭಕ್ತರಿಗೆ ತೊಂದರೆ ಕೊಡುವವರನ್ನು ಸಹಿಸದವನು.

೩೯. **ಸಜ್ಜನಪ್ರಿಯದರ್ಶನಃ** – ಸಜ್ಜನರಿಗೆ ಪ್ರಿಯವಾದ ಶಾಸ್ತ್ರವನ್ನು ಕೊಡುವವನು. ಜ್ಞಾನಿಗಳಿಗೆ ಪ್ರಿಯವಾದ ಭಗವದ್ದರ್ಶನ ಮಾಡಿಸುವವನು.

೪೦. **ರಾಮಾಂಗುಲೀಯವಾನ್** – ರಾಮನ ಅಂಗುಲೀಯಕವನ್ನು ಧರಿಸಲು ಯೋಗ್ಯನಾದವನು. ರಾಮದಾಸ ಎಂದು ಸೀತೆಯಲ್ಲಿ ಪರಿಚಯಿಸಿಕೊಳ್ಳಲು ಯೋಗ್ಯತೆಯನ್ನು ತಂದುಕೊಡುವವನು.

೪೧. **ಸರ್ವಶ್ರಮಹೀನಃ** – ಯಾವುದೇ ರೀತಿಯಾದ ಶ್ರಮಗಳಿಂದ ರಹಿತನಾದವನು. 'ನಿಸ್ಸೀಮಪೌರುಷಬಲಸ್ಯ ಕುತಃ ಶ್ರಮೋಽಸ್ಯ'

೪೨. **ಜಗತ್ಪತಿಃ** – ಜಗತ್ತಿಗೆ, ವಿಶ್ವಕ್ಕೆ ಒಡೆಯನಾಗಿ ರಕ್ಷಣೆಯನ್ನು ಕೊಡುವವನು.

೪೩. **ಮೈನಾಕವಿಪ್ರಿಯಃ** – ಮೈನಾಕವನ್ನು ಇಂದ್ರನಿಂದ ರಕ್ಷಿಸಿ, ಸೀತೆಯನ್ನು ಹುಡುಕುವಾಗ ಅವನಿಗೆ ಒಂದು ಸೇವಾಭಾಗ್ಯ ಕೊಟ್ಟು, ವಿಶೇಷ ಪ್ರೀತಿಯಿಂದ ಆಲಿಂಗಿಸಿ ಅನುಗ್ರಹಿಸಿದವನು.

೪೪. **ಸಿಂಧುಸಂಸ್ತುತಃ** – ಒಡೆಯನಾದ ರಾಮನ ಸೇವಾದೀಕ್ಷೆ ನೋಡಿ ಸಮುದ್ರರಾಜನಿಂದ ಸ್ತುತಿಸಿಕೊಂಡವನು.

೪೫. **ಕದ್ರುರಕ್ಷಕಃ** – ನಾಗಮಾತೆಯಾದ ಕದ್ರುವನ್ನು ರಕ್ಷಿಸಿದವನು. ಅವಳಿಗೆ ರಾಮಸೇವಾಭಾಗ್ಯ ಕೊಟ್ಟು ರಕ್ಷಿಸಿದವನು.

೪೬. **ದೇವಮಾನಪ್ರದಃ** – ದೇವತೆಗಳ ಮಾತಿಗೆ ಬೆಲೆಕೊಟ್ಟು ಕದ್ರುವಿನ ಬಾಯಿಯೊಳಗೆ ಹೋಗಿ ಬಂದು ದೇವತೆಗಳ ಗೌರವವನ್ನು ಹೆಚ್ಚಿಸಿದವನು.

೪೭. **ಸಾಧುಃ** – ಸಾತ್ತ್ವಿಕ ಗುಣ, ಸಂಪತ್ತು ಉಳ್ಳ ಸಾತ್ತ್ವಿಕ ಶಿರೋಮಣಿ.

೪೮. **ಸಿಂಹಿಕಾವಧಪಂಡಿತಃ** – ಸಿಂಹಿಣಿ ಎಂಬ ರಾಕ್ಷಸಿಯನ್ನು ಹೇಗೆ ಸಂಹಾರ ಮಾಡಬೇಕು ಎಂಬ ಉಪಾಯವನ್ನು ಚೆನ್ನಾಗಿ ತಿಳಿದು ಸಂಹರಿಸಿದವನು.

೪೯. **ಲಂಕಿನ್ಯಭಯದಾತಾ** – ಶಾಪದಿಂದ ಲಂಕಿಣಿ ಆಗಿ ಲಂಕಾಪಟ್ಟಣದ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತ ಸಾತ್ತ್ವಿಕಳಾದ ಊರ್ವಶಿಯನ್ನೂ ಶಾಪದಿಂದ ಮುಕ್ತಳನ್ನಾಗಿ ಮಾಡಿ ಅಭಯವನ್ನು ಕೊಟ್ಟವನು.

೫೦. **ಸೀತಾಶೋಕವಿನಾಶನಃ** – ಲೋಕವಿಡಂಬನೆಯಿಂದ ಸೀತಾಮಾತೆಗೆ ಬಂದ

ಶೋಕವನ್ನು ಪರಿಹಾರ ಮಾಡಿದವನು ರಾಮನ ಕ್ಷೇಮ ವಾರ್ತೆಯನ್ನು ತಿಳಿಸಿ.

೫೧. **ಜಾನಕೀಪ್ರಿಯಸಲ್ಲಾಪಃ** – ಸೀತೆಗೆ ಯಾವ ಮಾತನ್ನು ಕೇಳಿದಾಗ ಆನಂದ ವುಂಟಾಗುತ್ತದೋ ಅಂತಹ ರಾಮನ ವಿಷಯವನ್ನು ತಿಳಿಸಿ ಅವಳ ಜತೆ ಸಂಭಾಷಣೆ ಮಾಡಿದವನು.

೫೨. **ಚೂಡಾಮಣಿಧರಃ** – ಶ್ರೀರಾಮನಿಗಾಗಿ ಸೀತೆ ಕೊಟ್ಟಿರುವ ಚೂಡಾಮಣಿಯನ್ನು ಭಕ್ತಿಯಿಂದ ತೆಗೆದುಕೊಂಡು ಹೋದವನು.

೫೩. **ಕಪಿಃ** – ಕಪಿಶ್ರೇಷ್ಠನು. ಕ=ಸ್ವರೂಪಸುಖ, ಅನಂದವನ್ನು ತನ್ನನ್ನು ನಂಬಿ ಬಂದವರಿಗೆ, ರಾಮನ ದಾಸರಿಗೆ, ಪ=ಅನುಭವಕ್ಕೆ ತಂದುಕೊಡು ವವನು.

೫೪. **ದಶಾನನವರಚ್ಛೇತ್ತಾ** – ರಾವಣ ಪಡೆದಿರುವ ಅಜೇಯತ್ವ ವರವನ್ನು ನಾಶ ಮಾಡಿದವನು. ರಾವಣನನ್ನು ಸೋಲಿಸಿದವನು.

೫೫. **ಮಶಕೀಕೃತರಾಕ್ಷಸಃ** – ಎಲ್ಲಾ ರಾಕ್ಷಸರನ್ನೂ ಸೊಳ್ಳೆಯನ್ನು ಕೊಲ್ಲುವಂತೆ ಸಂಹರಿಸಿದವನು.

೫೬. **ಲಂಕಾಭಯಂಕರಃ** – ಸ್ವರ್ಣಮಯವಾದ, ಲೋಕಭಯಂಕರವಾದ ರಾವಣನಿಂದ ಪಾಲಿಸಲ್ಪಟ್ಟ ಲಂಕೆಗೇ ಭಯವನ್ನುಂಟುಮಾಡಿದವನು.

೫೭. **ಸಪ್ತಮಂತ್ರಿಪುತ್ರವಿನಾಶನಃ** – ಯುದ್ಧಕ್ಕೆ ಬಂದಿರುವ ರಾವಣನ ಏಳು ಜನ ದುಷ್ಟಮಂತ್ರಿಗಳ ಪುತ್ರರನ್ನು ಸಂಹರಿಸಿದವನು.

೫೮. **ದುರ್ಧರ್ಷಪ್ರಾಣಹರ್ತಾ** – ಭಯಂಕರನಾದ ದುರ್ಧರ್ಷನೆಂಬ ರಾಕ್ಷಸ ನನ್ನು ಲೀಲಾಜಾಲವಾಗಿ ಸಂಹರಿಸಿದವನು.

೫೯. **ಯೂಪಾಕ್ಷವಧಕಾರಕಃ** – ಯೂಪಾಕ್ಷನೆಂಬ ದೈತ್ಯನನ್ನು ಸಂಹರಿಸಲು ಪ್ರಧಾನ ಕಾರಣನಾದವನು.

೬೦. **ವಿರೂಪಾಕ್ಷಾಂತಕಾರೀ** – ವಿರೂಪಾಕ್ಷನನ್ನು ನಾಶ ಮಾಡಿದವನು.

೬೧. **ಭಾಸಕರ್ಣಶಿರೋಹರಃ** – ಭಾಸಕರ್ಣನೆಂಬ ರಾಕ್ಷಸನ ತಲೆಯನ್ನು ಕಡಿದು, ಸಂಹರಿಸಿದವನು.

೬೨. **ಪ್ರಘಸಪ್ರಾಣಹರ್ತಾ** – ಪ್ರಘಸನ ಸಂಹಾರಕರ್ತೃ.

೬೩. **ತೃತೀಯಾಂಶವಿನಾಶನಃ** – ರಾವಣನ ಸೈನ್ಯದ ಮೂರನೆಯ ಒಂದು ಭಾಗವನ್ನು ಕ್ಷಣದಲ್ಲಿ ನಾಶ ಮಾಡಿದವನು.

೬೪. **ಅಕ್ಷರಾಕ್ಷಸಸಂಹಾರೀ** – ರಾವಣನ ಮಗನಾದ ಅಕ್ಷಕುಮಾರನನ್ನು ಪಾದಗಳನ್ನು ಹಿಡಿದು ನೆಲಕ್ಕೆ ಅಪ್ಪಳಿಸಿ ಸಂಹರಿಸಿದವನು.

೬೫. **ತೃಣೀಕೃತದಶಾನನಃ** – ರಾವಣನ ಸೈನ್ಯವನ್ನು ನಾಶಮಾಡಿ ಅವನ ಸಾಮರ್ಥ್ಯವನ್ನು ಹುಲ್ಲುಕಡ್ಡಿಯಂತೆ ಮಾಡಿ ತನ್ನ ನಿಜಬಲವನ್ನು ತೋರಿಸಿದವನು.

೬೬. **ಸ್ವಪುಚ್ಛಗಾಗ್ನಿನಿರ್ದಗ್ಧಲಂಕಾಪುರವರಃ** – ತನ್ನ ಬಾಲಕ್ಕೆ ಬೆಂಕಿಕೊಡುವ ಮೂಲಕ ತನ್ನನ್ನು ಸಂಹರಿಸಲು ರಾವಣಾದಿಗಳು ಮಾಡಿದ ಉಪಾಯದಿಂದ ಅವನ ಲಂಕಾಪುರವನ್ನೇ ಸುಟ್ಟು ಭಸ್ಮ ಮಾಡಿದವನು.

೬೭. **ಅವ್ಯಯಃ** – ತನ್ನ ಬಾಲಕ್ಕೆ ಬೆಂಕಿ ಕೊಟ್ಟರೂ ಯಾವುದೇ ರೀತಿಯಾದ ವಿಕಾರರಹಿತನಾದವನು.

೬೮. **ಆನಂದವಾರಿಧಿಃ** – ಸ್ವರೂಪಾನಂದದ ಅನುಭವಪೂರ್ಣನಾದವನು. ಆನಂದಪರಿಪೂರ್ಣ.

೬೯. **ಧನ್ಯಃ** – ಸದಾ ದೇವರನ್ನು ಕಂಡು, ಪೂಜಿಸಿ, ಸ್ತುತಿಸಿ, ನಮಸ್ಕರಿಸಿ, ಅವನ ಸೇವೆಗಾಗಿ ತನ್ನ ಜೀವನವನ್ನು ಮುಡಿಪಾಗಿಟ್ಟಿರುವುದರಿಂದ ಜಗತ್ತಿನಲ್ಲಿ ಧನ್ಯನೆನಿಸಿಕೊಂಡವನು.

೭೦. **ಮೇಘಗಂಭೀರನಿಃಸ್ವನಃ** – ಮೇಘಗಳು ತುಂಬ ಜೋರಾಗಿ ಗುಡುಗಿದಾಗ ಯಾವ ರೀತಿಯಾದ ಸ್ವರ ಬರುವುದೋ ಅಷ್ಟು ಗಂಭೀರವಾಗಿ ಹುಂಕಾರ ಮಾಡುವವನು.

೭೧. **ಕಪಿಪ್ರವೀರಸಂಪೂಜ್ಯಃ** – ಕಪಿಶ್ರೇಷ್ಠನಾದ ಸುಗ್ರೀವನಿಂದ ಪೂಜಿಸಲ್ಪಟ್ಟವನು. ಮತ್ತು ಮುಕ್ತ, ಯೋಗ್ಯರಿಂದಲೂ ಪೂಜಿಸಲ್ಪಡುವವನು.

೭೨. **ಮಧುಭಕ್ಷಣತತ್ಪರಃ** – ಮಧು ಅಭಿಷೇಕಪ್ರಿಯ. ಜೇನಿನಂತೆ ಮಧುರವಾದ ಶ್ರೀಹರಿಯ ಗುಣಗಳ ಆಸ್ವಾದನೆಯಲ್ಲೇ ಆಸಕ್ತನಾದವನು.

೭೩. **ರಾಮಬಾಹುಸಮಾಶ್ಲಿಷ್ಟಃ** – ಅನ್ಯರಿಂದ ಅಸಾಧ್ಯವಾದ ಸೀತಾನ್ವೇಷಣೆ ಎಂಬ ಸುಂದರ ಕಾರ್ಯ ಮಾಡಿದುದರಿಂದ ಅತಿ ದುರ್ಲಭವಾದ ಶ್ರೀರಾಮನ ಸಹಯೋಗವೆಂಬ ಆಲಿಂಗನವನ್ನು ಪ್ರೀತಿಯಿಂದ ಪಡೆದವನು.

೭೪. **ಭವಿಷ್ಯಚ್ಚತುರಾನನಃ** – ಮುಂದಿನ ಕಲ್ಪದ ಚತುರ್ಮುಖ ಪ್ರಲಯ ಕಾಲದಲ್ಲಿಯೂ ಚುರುಕಾದ ಬುದ್ಧಿಯಿಂದ ಕೂಡಿದವನು.

೭೫. **ಸತ್ಯಲೋಕೇಶ್ವರಃ** – ಸಕಲ ಭುವನಗಳಿಗೆ ಒಡೆಯನಾಗಿರುವವನು. ಮುಖ್ಯವಾಗಿ ಸತ್ಯಲೋಕಾಧಿಪತಿ. ಸತ್ಯನಾಮನಾದ ಶ್ರೀಹರಿಯ ದರ್ಶನಕ್ಕೆ ಮುಖ್ಯ ಅಧಿಕಾರಿಯಾದವನು.

೭೬. **ಪ್ರಾಣಃ** – ಎಲ್ಲ ಜೀವರ ಒಳ–ಹೊರಗೆ ನಿಂತು ಸಕಲ ಕಾರ್ಯಗಳನ್ನೂ ಮಾಡಿ, ಮಾಡಿಸಿ ಮುಖ್ಯ ಚೇಷ್ಟಕನೆನಿಸಿದವನು. ಉಸಿರಾಟದ ಮೂಲಕ ಶ್ರೀಹರಿಯ ವಿಶೇಷ ಸೇವೆಯನ್ನು ತ್ರಿಕಾಲಗಳಲ್ಲೂ ನಡೆಸುವವನು.

೭೭. **ವಿಭೀಷಣವರಪ್ರದಃ** – ರಾವಣನ ತಮ್ಮನಾಗಿ ಹುಟ್ಟಿದ ಶ್ರೀರಾಮನ ವಿಶೇಷ ಭಕ್ತನಾದ, ವಿಭೀಷಣನನ್ನು ಸಲಹಿ, ರಕ್ಷಿಸಿದವನು.

೭೮. **ಧೂಮ್ರಾಕ್ಷಪ್ರಾಣಹರ್ತಾ** – ಮಹಾಯುದ್ಧದಲ್ಲಿ ಧೂಮ್ರಾಕ್ಷನೆಂಬ ಮಹಾ ಅಸುರನನ್ನು ಕೊಂದವನು.

೭೯. **ಕಪಿಸೈನ್ಯವಿವರ್ಧನಃ** – ಕಪಿಸೈನ್ಯದ ಬಲವನ್ನು ತನ್ನ ಸಾಮರ್ಥ್ಯದಿಂದ ಹೆಚ್ಚಿಸಿದವನು. ತನ್ನ ಉಪದೇಶಗಳಿಂದ ಯೋಗ್ಯರನ್ನು ಬಲಪಡಿಸಿದವನು.

೮೦. **ತ್ರಿಶೀರ್ಷಾಂತಕಃ** – ತ್ರಿಶೀರ್ಷನೆಂಬ ದೈತ್ಯನನ್ನು ಸಂಹರಿಸಿದವನು.

೮೧. **ಉನ್ಮತ್ತನಾಶನಃ** – ಉನ್ಮತ್ತನೆಂಬ ಶ್ರೀರಾಮನ ದ್ವೇಷಿಯನ್ನು ನಾಶ ಮಾಡಿದವನು.

೮೨. **ಅಕಂಪನಾಂತಕಃ** – ಅಕಂಪನನನ್ನು ಸದೆಬಡಿದವನು.

೮೩. **ದೇವಾಂತಕಾಂತಕಃ** – ದೇವಾಂತಕನೆಂಬ ದೈತ್ಯನಾಶಕ. ದೇವತೆಗಳೆಂಬ ಸಾತ್ತ್ವಿಕ ಗುಣಗಳನ್ನು ನಾಶಮಾಡಲು ಬಂದ ಕಲಿಯನ್ನು ನಮ್ಮೊಳಗೆ ಇರದಂತೆ ನಾಶ ಮಾಡುವವನು.

೮೪. **ಶೂರಃ** – ಭುಜಬಲ ಮತ್ತು ಬುದ್ಧಿಬಲಗಳಿಂದ ಪೂರ್ಣ ಪರಾಕ್ರಮಶಾಲಿ, ಧೈರ್ಯಶಾಲಿ.

೮೫. **ಯುದ್ಧೋನ್ಮತ್ತವಿನಾಶಕಃ** – ಸದಾ ಯುದ್ಧದಲ್ಲಿ ರತರಾದ ದೈತ್ಯರನ್ನು ಸದೆಬಡಿದವನು.

೮೬. **ನಿಕುಂಭಾಂತಕಃ** – ನಿಕುಂಭನೆಂಬ ರಾಕ್ಷಸನನ್ನು ಯಮನ ಪಟ್ಟಣಕ್ಕೆ ಕಳುಹಿಸಿದವನು.

೮೭. **ಶತ್ರುಸೂದನಃ** – ಶ್ರೀರಾಮನ ಶತ್ರುಗಳು ಯಾರೇ ಇರಲಿ ಅವರನ್ನು ಸೀಳಿ ಹಾಕುವವನು.

೮೮. **ಸುರವೀಕ್ಷಿತಃ** – ಭೂಲೋಕದಲ್ಲಿ ಹನುಮನಾಗಿ ಮಾಡುವ ಎಲ್ಲಾ ಸತ್ಕಾರ್ಯಗಳನ್ನು ದೇವತೆಗಳಿಗೆ ತೋರಿಸಿ, ಅವರಿಗೆ ಆನಂದಕೊಡುವವನು.

೮೯. **ದಶಾಸ್ಯಗರ್ವಹರ್ತಾ** – ಹತ್ತು ತಲೆಯ ರಾವಣನ ತಲೆಗಳಲ್ಲಿ ತುಂಬಿದ 'ನಾನೇ ಸರ್ವನಿಯಂತೃ' ಎಂಬ ಅಹಂಕಾರವನ್ನು ನಾಶ ಮಾಡಿ, ಶ್ರೀರಾಮನು ಸರ್ವೋತ್ತಮನೆಂಬ ಬುದ್ಧಿ ಬರುವಂತೆ ಮಾಡಿದವನು.

೯೦. **ಲಕ್ಷ್ಮಣಪ್ರಾಣದಾಯಕಃ** – ಇಂದ್ರಜಿತುವಿನ ಅಸ್ತ್ರಪ್ರಯೋಗದಿಂದ ಮೂರ್ಛಿತನಾದ ಲಕ್ಷ್ಮಣನನ್ನು ಸಂಜೀವಿನಿಪರ್ವತ ತಂದು ಜೀವ ಕೊಟ್ಟವನು.

೯೧. **ಕುಂಭಕರ್ಣಜಯೀ** – ರಾವಣನ ತಮ್ಮನಾದ, ಸದಾ ಮದಭರಿತನಾದ ಕುಂಭ ಕರ್ಣನನ್ನು ಗೆದ್ದವನು. ನಮ್ಮಲ್ಲಿರುವ ಆಲಸ್ಯವನ್ನು ದೂರ ಮಾಡಿ ಉದ್ಧಾರ ಮಾಡುವವನು.

೯೨. **ಶಕ್ರಶತ್ರುಗರ್ವಾಪಹಾರಕಃ** – ಇಂದ್ರನ ಶತ್ರುವಾಗಿ ಬೆಳೆದುನಿಂತ ದೈತ್ಯರ, ರಾವಣನ ಅಹಂಕಾರವನ್ನು ಪರಿಹಾರ ಮಾಡಿದವನು.

೯೩. **ಸಂಜೀವನಾಚಲಾನೇತಾ** – ಒಮ್ಮೆ ಅಲ್ಲ, ಲಕ್ಷ್ಮಣನನ್ನು, ಕಪಿಗಳನ್ನು ಬದುಕಿಸಲು ಎರಡು ಬಾರಿ ಸಂಜೀವನಪರ್ವತವನ್ನು ಕಿತ್ತು ತಂದವನು.

೯೪. **ಮೃಗವಾನರಜೀವನಃ** – ಎಲ್ಲಾ ರಾಮಸೈನ್ಯವಾದ, ವಾನರಸೈನ್ಯವನ್ನು ಬದುಕಿಸಿದವನು. ಜ್ಞಾನವನ್ನಿತ್ತು ರಾಮಭಕ್ತರನ್ನು ಉದ್ಧಾರ ಮಾಡಿದವನು.

೯೫. **ಜಾಂಬವತ್ಪ್ರಿಯಕೃತ್** – ವೃದ್ಧನಾದ, ಭಕ್ತಾಗ್ರೇಸರನಾದ ಜಾಂಬವಂತನಿಗೆ ಪ್ರೀತಿಯನ್ನು ಉಂಟು ಮಾಡುವ ಕಾರ್ಯವನ್ನು ಮಾಡಿದವನು.

೯೬. ವೀರಃ – ಜ್ಞಾನಕ್ಕಾಗಿ ಅವತಾರ ಮಾಡಿದ ವಾಯುದೇವ, ಬಹು ಪರಾಕ್ರಮಶಾಲಿ.

೯೭. **ಸುಗ್ರೀವಾಂಗದಸೇವಿತಃ** – ಕಪಿರಾಜನಾದ ಸುಗ್ರೀವ, ವಾಲಿಪುತ್ರನಾದ ಅಂಗದನಿಂದ ಸೇವಿಸಲ್ಪಟ್ಟವನು, ಆಶ್ರಯಿಸಲ್ಪಟ್ಟವನು.

೯೮. **ಭರತಪ್ರಿಯಸಲ್ಲಾಪಃ** – ಶ್ರೀರಾಮನ ಬಾರದಿರುವಿಕೆಯನ್ನು ಕಂಡು ಆತ್ಮಾಹುತಿಯನ್ನು ಮಾಡಿಕೊಳ್ಳುವಾಗ 'ರಾಮ ಬಂದ' ಎಂಬ ಪ್ರಿಯವಾದ ಮಾತನ್ನಾಡಿ ಭರತನನ್ನು ಸಂತೋಷಗೊಳಿಸಿದವನು.

೯೯. **ಸೀತಾಹಾರವಿರಾಜಿತಃ** – ದಾಸಾಗ್ರಣಿ ಎಂದು ಗುರುತಿಸಿ ಸೀತಾದೇವಿಯಿಂದ ಮುತ್ತಿನ ಹಾರವನ್ನು ಅನುಗ್ರಹಪೂರ್ವಕ ಪಡೆದವನು.

೧೦೦. **ರಾಮೇಷ್ಟಃ** – ಶ್ರೀರಾಮಚಂದ್ರನಿಗೆ ಬಲು ಇಷ್ಟವಾದ ಕಾರ್ಯ ಮಾಡಿ, ರಾಮನಿಗೆ ಅತ್ಯಂತ ಪ್ರೀತಿಪಾತ್ರನಾದವನು.

೧೦೧. **ಫಲ್ಗುನಸಖಃ** – ಇಂದ್ರನಿಗೆ ಕಾಲಕಾಲಕ್ಕೆ ಉಪದೇಶಿಸುವ ಸಖನಾಗಿದ್ದವನು.

೧೦೨. **ಶರಣ್ಯತ್ರಾಣತತ್ಪರಃ** – ತನ್ನನ್ನು ಆಶ್ರಯಿಸಿದವರಿಗೆ ಎಲ್ಲಾ ವಿಧದ ರಕ್ಷಣೆ ನೀಡುವುದರಲ್ಲೇ ರತನಾಗಿರುವವನು.

೧೦೩. **ಉತ್ಪತ್ತಿಕರ್ತಾ** – ಶ್ರೀರಾಮನ ಅಪ್ಪಣೆಯಿಂದ ಮುಂದೆ ಚತುರ್ಮುಖನಾಗಿ ಜಗತ್ ಸೃಷ್ಟಿ ಮಾಡುವವನು.

೧೦೪. **ಸ್ಥಿತಿಕರ್ತಾ** – ಎಲ್ಲಾ ಜೀವರ ಉಸಿರಾಟದ ಮೂಲಕ ಹಂಸಜಪ ಮಾಡುತ್ತ ಜೀವರಾಶಿಗಳನ್ನು ಪ್ರಾಣನಾಗಿ ಸಂರಕ್ಷಿಸುವವನು.

೧೦೫. **ಸಂಹಾರಕರ್ತಾ** – ರುದ್ರನಲ್ಲಿ ಒಂದು ರೂಪದಿಂದ ಇದ್ದು ಶ್ರೀಹರಿಯ ಆಜ್ಞೆಯಂತೆ ಜಗತ್ತನ್ನು ಸಂಹರಿಸುವವನು. ಶ್ರೀಹರಿಯ ಅಪ್ಪಣೆಯಂತೆ ಜೀವರ ಸಾಧನೆ ಮುಗಿದ ಕೂಡಲೇ ಅವರಿಗೆ ಇರುವ ಲಿಂಗದೇಹವೆಂಬ ಸಂಸಾರವನ್ನು ನಾಶ ಮಾಡುವವನು.

೧೦೬. **ಕಿಂಪುರುಷಾಲಯಃ** – ಶ್ರೀರಾಮನಲ್ಲಿ ಭಕ್ತಿಯನ್ನು ಮತ್ತು ವರವನ್ನು ಪಡೆದು ಈಗಲೂ ಹನುಮರೂಪದಿಂದ 'ಕಿಂಪುರುಷಖಂಡ'ದಲ್ಲಿ ಶ್ರೀರಾಮ ಭಜನೆ–ಚಿಂತನೆ–ಉಪಾಸನೆ ಮಾಡುತ್ತ ಇರುವವನು.

೧೦೭. **ವೇದವೇದಾಂಗತತ್ತ್ವಜ್ಞಃ** – ವೇದ–ವೇದಾಂಗಗಳಾದ ಜ್ಯೌತಿಷಾದಿಗಳ ಮತ್ತು ಭಗವಂತನ ನೈಜವಿಚಾರಗಳನ್ನು ಎಲ್ಲ ಚೆನ್ನಾಗಿ ತಿಳಿದವನು. ಸರ್ವಜ್ಞನಾದವನು.

೧೦೮. **ಭವರೋಗಸ್ಯ ಭೇಷಜಃ** – ವೇದ=ವೇದಾಂತದ ತಿರುಳನ್ನು ತಿಳಿದು, ಬೇರೆ ಸಾಧಕರಿಗೆ ತಿಳಿಸುವವನು. ತನ್ಮೂಲಕ ಸಾಧಕರಲ್ಲಿ ಅನಾದಿ ಕಾಲದಿಂದ ನೆಲೆಯಾಗಿರುವ ಸಂಸಾರವೆಂಬ ದೊಡ್ಡ ರೋಗವನ್ನು ಪರಿಹಾರ ಮಾಡಿ, ಸ್ವರೂಪಾನಂದವನ್ನು ಸವಿಯುವ ಯೋಗವನ್ನು ಕೊಟ್ಟ ದೊಡ್ಡ ವೈದ್ಯ. ನಮ್ಮಲ್ಲಿರುವ ಅಹಂಕಾರ–ಮಮಕಾರಾದಿ ಸಂಸಾರವೆಂಬ ರೋಗವನ್ನು ಪರಿಹಾರ ಮಾಡಿ ಸಲಹಲಿ ಎಂಬ ಪ್ರಾರ್ಥನೆಯೊಂದಿಗೆ ಮಧ್ವಾಂತರ್ಗತ **ಶ್ರೀಕೃಷ್ಣಾರ್ಪಣಮಸ್ತು** ॥

* * *

### ಶ್ರೀರಘುಪ್ರವೀರತೀರ್ಥವಿರಚಿತಂ

# ಶ್ರೀಭೀಮಸೇನಾಷ್ಟೋತ್ತರಶತನಾಮಸ್ತೋತ್ರಮ್

ನಮಃ ಶ್ರೀಭೀಮಸೇನಾಯ ಸಂಹೃತಾಶೇಷಶತ್ರವೇ ।
ಪೂರ್ಣಾನಂದಾಯ ಪಾಂಚಾಲೀಕಟಾಕ್ಷಪ್ರೇಕ್ಷಿತಾತ್ಮನೇ ॥ ೧ ॥

ಶ್ರೀಭೀಮೋ ಭೀಮಸೇನಶ್ಚ ಮಾರುತಿಃ ಪಾಂಡುನಂದನಃ ।
ವೃಕೋದರೋ ಗದಾಪಾಣಿಃ ಕುಂತೀಪುತ್ರೋ ಮಹಾಬಲಃ ॥ ೨ ॥

ವೇದವೇದಾಂಗತತ್ತ್ವಜ್ಞೋ ಧನುರ್ವೇದವಿಶಾರದಃ ।
ಸರ್ವಶಾಸ್ತ್ರಾರ್ಥತತ್ತ್ವಜ್ಞೋ ವದಾನ್ಯಃ ಪೌರವಾಗ್ರಣೀಃ ॥ ೩ ॥

ಶ್ರೀಕೃಷ್ಣದಯಿತಃ ಶ್ರೀಮಾನರ್ಜುನಾಭೀಷ್ಟಸಾಧಕಃ ।
ಯುಧಿಷ್ಠಿರಪ್ರತಿಷ್ಠಾತಾ ಸಹದೇವವರಪ್ರದಃ ॥ ೪ ॥

ನಕುಲಾಭೀಷ್ಟದಾತಾ ಚ ಕೃಷ್ಣಪಾದಾಂಬುಜಾಶ್ರಯಃ ।
ಜಿತಚೇದಿಪತಿರ್ದಂತವಕ್ರಗರ್ವಾಪಹಾರಕಃ ॥ ೫ ॥

ಜಿತಸೌಭಪತಿರ್ಹಂಸಜೇತಾ ಡಿಭಕದರ್ಪಹಾ ।
ಜಿತೈಕಲವ್ಯೋ ದುರ್ಧರ್ಷಸ್ತಥಾ ಪೌಂಡ್ರಕದರ್ಪಹಾ ॥ ೬ ॥

ಜಿತರುಗ್ಮೀ ಮದ್ರರಾಜಜೇತಾ ಸತ್ಯಪರಾಕ್ರಮಃ ।
ಪುರೋಚನಪ್ರದಗ್ಧಾ ಚ ಹಿಡಿಂಬವಧಕಾರಕಃ ॥ ೭ ॥

ಹಿಡಿಂಬೀಪ್ರಿಯಭರ್ತಾ ಚ ಸದಾಽಭೀಷ್ಟಸುರದ್ರುಮಃ ।
ವಿಪುಲಾಂಸೋ ಮಹಾಬಾಹುಃ ಕಂಬುಗ್ರೀವೋ ಮಹಾಹನುಃ ॥ ೮ ॥

ಮಹೋರಸ್ಕೋ ಮಹೇಷ್ವಾಸಃ ಸ್ವರ್ಣಭಾಃ ಶುಭಲಕ್ಷಣಃ ।
ಪೀನವಕ್ಷಾ ವಿಶಾಲಾಕ್ಷಃ ಸುವ್ಯಕ್ತಶ್ಮಶ್ರುಮಂಡಲಃ ॥ ೯ ॥

ಸೌಂದರ್ಯಜಿತಕಂದರ್ಪೋ ದೋಷದೂರಸುರದ್ರುಮಃ ।
ಘಟೋತ್ಕಚಾಭೀಷ್ಟದಾಯೀ ವ್ಯಾಸಪಾದಾಂಬುಜಾಶ್ರಯಃ ॥ ೧೦ ॥

ಬಕರಾಕ್ಷಸಸಂಹಾರೀ ಸಾಧುಸಾಧ್ವಸನಾಶನಃ ।
ದ್ರೌಪದೀಪ್ರಾಣನಾಥಶ್ಚ ಕಾಲೀದೇವೀಷ್ಟದಾಯಕಃ ॥ ೧೧ ॥

ಇಂದ್ರಪ್ರಸ್ಥಕೃತಾವಾಸಃ ಪೌರಜಾನಪದಪ್ರಿಯಃ ।
ದೀನಾನುಕಂಪೀ ಧೃತಿಮಾನ್ ವಶೀ ತ್ರೈಲೋಕ್ಯವಿಶ್ರುತಃ ॥ ೧೨ ॥

ಪ್ರಿಯಂವದೋ ಧರ್ಮರತಃ ಬ್ರಾಹ್ಮಣಪ್ರತಿಪೂಜಕಃ ।
ಜರಾಸಂಧಾಂತಕೃದ್ವೀರಃ ಪ್ರಧಾನಪುರುಷೋತ್ತಮಃ ॥ ೧೩ ॥

ಕೃಷ್ಣಬಾಹುಸಮಾಶ್ಲಿಷ್ಟೋ ಗುಡಾಕೇಶಾಭಿವಂದಿತಃ ।
ಜಿತೇಂದ್ರಿಯೋ ಜಿತಾಶೇಷೋ ಜಿತವೀಂದ್ರೋ ಜಿತೇಶ್ವರಃ ॥ ೧೪ ॥

ಜಿತಬಾಣೋ ಜಿತಾಮಿತ್ರೋ ಜಿತಕರ್ಣೋ ಮಹಾರಥಃ ।
ರಾಜೇಂದ್ರಃ ಸತ್ಯಸಂಕಲ್ಪೋ ರಾಜಸೂಯಾಶ್ವಮೇಧಕೃತ್ ॥ ೧೫ ॥

ಕಿರ್ಮೀರಪ್ರಾಣಹರ್ತಾ ಚ ಮಣಿಮದ್ವಧಪಂಡಿತಃ ।
ತ್ರಿಕೋಟಿತ್ರಿಮಹತ್ಪದ್ಮರಾಕ್ಷಸೇಂದ್ರನಿಷೂದನಃ ॥ ೧೬ ॥

ಸುರಪ್ರಸೂನಾಭಿವೃಷ್ಟಃ ದ್ರೌಪದೀಪ್ರಿಯಪುಷ್ಪದಃ ।
ವಿರಾಟನಗರಾವಾಸೀ ಮಲ್ಲಯುದ್ಧವಿಶಾರದಃ ॥ ೧೭ ॥

ತಥಾ ಕೀಚಕಸಂಹಾರೀ ಜಿತಸರ್ವಮನೋರಥಃ ।
ಜಿತಭೀಷ್ಮೋ ಜಿತದ್ರೋಣೋ ದ್ರೌಣಿದರ್ಪವಿನಾಶನಃ ॥ ೧೮ ॥

ಕೃಪಾಚಾರ್ಯವಿಜೇತಾ ಚ ಭಗದತ್ತಜಯೀ ತಥಾ ।
ಜಿತಭೂರಿಶ್ರವಾಃ ಸಿಂಹಧ್ವಜೋಽಲಂಬುಸದರ್ಪಹಾ ॥ ೧೯ ॥

ಬಾಹ್ಲೀಕವಧಕರ್ತಾ ಚ ದುಃಶಾಸನವಿನಾಶನಃ ।
ಸತ್ಯಸಂಧೋ ಮಹಾತೇಜಾಃ ದುರ್ಯೋಧನವಿನಾಶಕೃತ್ ॥ ೨೦ ॥

ಷಟ್‌ಸಂಖ್ಯಾಕ್ಷೌಹಿಣೀಹಂತಾ ಪೃಥ್ವೀಭಾರವಿನಾಶನಃ ।
ಕೃಷ್ಣಾಕಾಲೀಸಮಾಶ್ಲಿಷ್ಟೋ ನಾನಾಽಽಭರಣಭೂಷಿತಃ ॥ ೨೧ ॥

ವಾಣೀಗರುಡಶೇಷೇಶಶಕ್ರಪೂರ್ವಸುರಾರ್ಚಿತಃ ।
ತ್ರಯೋವಿಂಶತ್ಸುತರುಣೀಪತಿರಾನಂದವಾರಿಧಿಃ ॥ ೨೨ ॥

ಇತಿ ಶ್ರೀಭೀಮಸನ್ನಾಮ್ನಾಮಷ್ಟೋತ್ತರಶತಂ ಪಠನ್ ।
ಕನ್ಯಾಕಾಮೋ ಲಭೇತ್ ಕನ್ಯಾಂ ಧನಕಾಮೋ ಲಭೇದ್ಧನಮ್ ॥ ೨೩ ॥

ಪುತ್ರಕಾಮೋ ಲಭೇತ್ ಪುತ್ರಂ ಯಶಃಕಾಮೋ ಲಭೇದ್ ಯಶಃ ।
ವಿದ್ಯಾಕಾಮೋ ಲಭೇದ್ವಿದ್ಯಾಮಕಾಮೋ ಮೋಕ್ಷಮಾಪ್ನುಯಾತ್ ॥ ೨೪ ॥

ಯ ಇದಂ ಪಠತೇ ಭಕ್ತ್ಯಾ ಶೃಣುಯಾತ್ ಸುಸಮಾಹಿತಃ ।
ಭೀಮಸೇನಪ್ರಸಾದೇನ ಹ್ಯಮುತ್ರೇಹ ಚ ಮೋದತೇ ॥ ೨೫ ॥

ಇತಿ ಶ್ರೀಭೀಮಸೇನಸ್ಯ ನಾಮ್ನಾಮಷ್ಟೋತ್ತರಂ ಶತಮ್ ।
ರಘುಪ್ರವೀರಕರ್ಮಂದೀ ಚಕ್ರೇ ಸರ್ವೇಷ್ಟಸಾಧಕಮ್ ॥ ೨೬ ॥

॥ ಇತಿ ಶ್ರೀಭೀಮಸೇನಾಷ್ಟೋತ್ತರಶತನಾಮಸ್ತೋತ್ರಮ್ ॥

* * *

# ಶ್ರೀಭೀಮಸೇನಾಷ್ಟೋತ್ತರಶತನಾಮಾವಲೀ

ಶ್ರೀಭೀಮಾಯ ನಮಃ
ಶ್ರೀಭೀಮಸೇನಾಯ ನಮಃ
ಶ್ರೀಮಾರುತಯೇ ನಮಃ
ಶ್ರೀಪಾಂಡುನಂದನಾಯ ನಮಃ
ಶ್ರೀವೃಕೋದರಾಯ ನಮಃ
ಶ್ರೀಗದಾಪಾಣಯೇ ನಮಃ
ಶ್ರೀಕುಂತೀಪುತ್ರಾಯ ನಮಃ
ಶ್ರೀಮಹಾಬಲಾಯ ನಮಃ
ಶ್ರೀವೇದವೇದಾಂಗತತ್ತ್ವಜ್ಞಾಯ ನಮಃ
ಶ್ರೀಧನುರ್ವೇದವಿಶಾರದಾಯ ನಮಃ । ೧೦
ಶ್ರೀಸರ್ವಶಾಸ್ತ್ರಾರ್ಥತತ್ತ್ವಜ್ಞಾಯ ನಮಃ
ಶ್ರೀವದಾನ್ಯಾಯ ನಮಃ ।
ಶ್ರೀಪೌರವಾಗ್ರಣ್ಯೈ ನಮಃ ।
ಶ್ರೀಕೃಷ್ಣದಯಿತಾಯ ನಮಃ ।
ಶ್ರೀಶ್ರೀಮತೇ ನಮಃ ।
ಶ್ರೀಅರ್ಜುನಾಭೀಷ್ಟಸಾಧಕಾಯ ನಮಃ ।
ಶ್ರೀಯುಧಿಷ್ಠಿರಪ್ರತಿಷ್ಠಾತ್ರೇ ನಮಃ ।
ಶ್ರೀಸಹದೇವವರಪ್ರದಾಯ ನಮಃ ।

ಶ್ರೀನಕುಲಾಭೀಷ್ಟದಾತ್ರೇ ನಮಃ ।
ಶ್ರೀಕೃಷ್ಣಪಾದಾಂಬುಜಾಶ್ರಯಾಯ ನಮಃ । ೨೦
ಶ್ರೀಜಿತಚೇದಿಪತಯೇ ನಮಃ ।
ಶ್ರೀದಂತವಕ್ರಗರ್ವಾಪಹಾರಕಾಯ ನಮಃ ।
ಶ್ರೀಜಿತಸೌಭಪತಯೇ ನಮಃ ।
ಶ್ರೀಹಂಸಜೇತ್ರೇ ನಮಃ ।
ಶ್ರೀಡಿಭಕದರ್ಪಘ್ನೇ ನಮಃ ।
ಶ್ರೀಜಿತೈಕಲವ್ಯಾಯ ನಮಃ ।
ಶ್ರೀದುರ್ಧರ್ಷಾಯ ನಮಃ ।
ಶ್ರೀಪೌಂಡ್ರಕದರ್ಪಘ್ನೇ ನಮಃ ।
ಶ್ರೀಜಿತರುಗ್ಮಿಣೇ ನಮಃ ।
ಶ್ರೀಮದ್ರರಾಜಜೇತ್ರೇ ನಮಃ । ೩೦
ಶ್ರೀಸತ್ಯಪರಾಕ್ರಮಾಯ ನಮಃ ।
ಶ್ರೀಪುರೋಚನಪ್ರದಗ್ಧ್ರೇ ನಮಃ ।
ಶ್ರೀಹಿಡಿಂಬವಧಕಾರಕಾಯ ನಮಃ ।
ಶ್ರೀಹಿಡಿಂಬೀಪ್ರಿಯಭರ್ತ್ರೇ ನಮಃ ।
ಶ್ರೀಸರ್ವಾಭೀಷ್ಟಸುರದ್ರುಮಾಯ ನಮಃ ।
ಶ್ರೀವಿಪುಲಾಂಸಾಯ ನಮಃ ।
ಶ್ರೀಮಹಾಬಾಹವೇ ನಮಃ ।
ಶ್ರೀಕಂಬುಗ್ರೀವಾಯ ನಮಃ ।
ಶ್ರೀಮಹಾಹನವೇ ನಮಃ ।
ಶ್ರೀಮಹೋರಸ್ಕಾಯ ನಮಃ । ೪೦
ಶ್ರೀಮಹೇಷ್ವಾಸಾಯ ನಮಃ ।
ಶ್ರೀಸ್ವರ್ಣಭಾಸೇ ನಮಃ ।
ಶ್ರೀಶುಭಲಕ್ಷಣಾಯ ನಮಃ ।
ಶ್ರೀಪೀನವಕ್ಷಸೇ ನಮಃ ।
ಶ್ರೀವಿಶಾಲಾಕ್ಷಾಯ ನಮಃ ।
ಶ್ರೀಸುವ್ಯಕ್ತಶ್ಮಶ್ರುಮಂಡಲಾಯ ನಮಃ ।
ಶ್ರೀಸೌಂದರ್ಯಜಿತಕಂದರ್ಪಾಯ ನಮಃ ।
ಶ್ರೀದೋಷದೂರಸುರದ್ರುಮಾಯ ನಮಃ ।
ಶ್ರೀಘಟೋತ್ಕಚಾಭೀಷ್ಟದಾಯಿನೇ ನಮಃ ।
ಶ್ರೀವ್ಯಾಸಪಾದಾಂಬುಜಾಶ್ರಯಾಯ ನಮಃ । ೫೦
ಶ್ರೀಬಕರಾಕ್ಷಸಸಂಹಾರಿಣೇ ನಮಃ ।
ಶ್ರೀಸಾಧುಸಾಧ್ವಸನಾಶನಾಯ ನಮಃ ।
ಶ್ರೀದ್ರೌಪದೀಪ್ರಾಣನಾಥಾಯ ನಮಃ ।
ಶ್ರೀಕಾಲೀದೇವೀಷ್ಟದಾಯಕಾಯ ನಮಃ ।
ಶ್ರೀಇಂದ್ರಪ್ರಸ್ಥಕೃತಾವಾಸಾಯ ನಮಃ ।
ಶ್ರೀಪೌರಜಾನಪದಪ್ರಿಯಾಯ ನಮಃ ।
ಶ್ರೀದೀನಾನುಕಂಪಿನೇ ನಮಃ ।
ಶ್ರೀಧೃತಿಮತೇ ನಮಃ ।
ಶ್ರೀವಶಿನೇ ನಮಃ ।
ಶ್ರೀತ್ರೈಲೋಕ್ಯವಿಶ್ರುತಾಯ ನಮಃ । ೬೦
ಶ್ರೀಪ್ರಿಯಂವದಾಯ ನಮಃ ।
ಶ್ರೀಧರ್ಮರತಾಯ ನಮಃ ।
ಶ್ರೀಬ್ರಾಹ್ಮಣಪ್ರತಿಪೂಜಕಾಯ ನಮಃ ।
ಶ್ರೀಜರಾಸಂಧಾಂತಕೃತೇ ನಮಃ ।
ಶ್ರೀವೀರಾಯ ನಮಃ ।
ಶ್ರೀಪ್ರಧಾನಪುರುಷೋತ್ತಮಾಯ ನಮಃ ।
ಶ್ರೀಕೃಷ್ಣಬಾಹುಸಮಾಶ್ಲಿಷ್ಟಾಯ ನಮಃ ।
ಶ್ರೀಗುಡಾಕೇಶಾಭಿವಂದಿತಾಯ ನಮಃ ।

ಶ್ರೀಜಿತೇಂದ್ರಿಯಾಯ ನಮಃ ।
ಶ್ರೀಜಿತಾಶೇಷಾಯ ನಮಃ । ೭೦
ಶ್ರೀಜಿತವೀಂದ್ರಾಯ ನಮಃ ।
ಶ್ರೀಜಿತೇಶ್ವರಾಯ ನಮಃ ।
ಶ್ರೀಜಿತಬಾಣಾಯ ನಮಃ ।
ಶ್ರೀಜಿತಾಮಿತ್ರಾಯ ನಮಃ ।
ಶ್ರೀಜಿತಕರ್ಣಾಯ ನಮಃ ।
ಶ್ರೀಮಹಾರಥಾಯ ನಮಃ ।
ಶ್ರೀರಾಜೇಂದ್ರಾಯ ನಮಃ ।
ಶ್ರೀಸತ್ಯಸಂಕಲ್ಪಾಯ ನಮಃ ।
ಶ್ರೀರಾಜಸೂಯಾಶ್ವಮೇಧಕೃತೇ ನಮಃ ।
ಶ್ರೀಕಿರ್ಮೀರಪ್ರಾಣಹರ್ತ್ರೇ ನಮಃ । ೮೦
ಶ್ರೀಮಣಿಮದ್ವಧಪಂಡಿತಾಯ ನಮಃ ।
ಶ್ರೀತ್ರಿಕೋಟಿತ್ರಿಮಹತ್ಪದ್ಮರಾಕ್ಷಸೇಂದ್ರ
ನಿಷೂದನಾಯ ನಮಃ ।
ಶ್ರೀಸುರಪ್ರಸೂನಾಭಿವೃಷ್ಟಾಯ ನಮಃ ।
ಶ್ರೀದ್ರೌಪದೀಪ್ರಿಯಪುಷ್ಪದಾಯ ನಮಃ ।
ಶ್ರೀವಿರಾಟನಗರಾವಾಸಿನೇ ನಮಃ ।
ಶ್ರೀಮಲ್ಲಯುದ್ಧವಿಶಾರದಾಯ ನಮಃ ।
ಶ್ರೀಕೀಚಕಸಂಹಾರಿಣೇ ನಮಃ ।
ಶ್ರೀಜಿತಸರ್ವಮನೋರಥಾಯ ನಮಃ ।
ಶ್ರೀಜಿತಭೀಷ್ಮಾಯ ನಮಃ ।
ಶ್ರೀಜಿತದ್ರೋಣಾಯ ನಮಃ । ೯೦
ಶ್ರೀದ್ರೌಣಿದರ್ಪವಿನಾಶಕಾಯ ನಮಃ ।
ಶ್ರೀಕೃಪಾಚಾರ್ಯವಿಜೇತ್ರೇ ನಮಃ ।
ಶ್ರೀಭಗದತ್ತಜಯಿನೇ ನಮಃ ।
ಶ್ರೀಜಿತಭೂರಿಶ್ರವಸೇ ನಮಃ ।
ಶ್ರೀಸಿಂಹಧ್ವಜಾಯ ನಮಃ ।
ಶ್ರೀಅಲಂಬುಸದರ್ಪಘ್ನೇ ನಮಃ ।
ಶ್ರೀಬಾಹ್ಲೀಕವಧಕರ್ತ್ರೇ ನಮಃ ।
ಶ್ರೀದುಃಶಾಸನವಿನಾಶನಾಯ ನಮಃ ।
ಶ್ರೀಸತ್ಯಸಂಧಾಯ ನಮಃ ।
ಶ್ರೀಮಹಾತೇಜಸೇ ನಮಃ । ೧೦೦
ಶ್ರೀದುರ್ಯೋಧನವಿನಾಶಕೃತೇ ನಮಃ ।
ಶ್ರೀಷಟ್ಸಂಖ್ಯಾಕ್ಷೋಹಿಣೀಹಂತ್ರೇ ನಮಃ ।
ಶ್ರೀಪೃಥ್ವೀಭಾರವಿನಾಶನಾಯ ನಮಃ ।
ಶ್ರೀಕೃಷ್ಣಾಕಾಲೀಸಮಾಶ್ಲಿಷ್ಟಾಯ ನಮಃ ।
ಶ್ರೀನಾನಾಭರಣಭೂಷಿತಾಯ ನಮಃ ।
ಶ್ರೀವಾಣೀಗರುಡಶೇಷೇಶಶಕ್ರಪೂರ್ವ
ಸುರಾರ್ಚಿತಾಯ ನಮಃ ।
ಶ್ರೀತ್ರಯೋವಿಂಶತ್ಸುತರುಣೀಪತಯೇ
ನಮಃ ।
ಶ್ರೀಆನಂದವಾರಿಧಯೇ ನಮಃ । ೧೦೮

॥ ಶ್ರೀಕೃಷ್ಣಾರ್ಪಣಮಸ್ತು ॥

* * *

# ಶ್ರೀಭೀಮಸೇನಾಷ್ಟೋತ್ತರಶತನಾಮಾವಲೀ

೧. **ಶ್ರೀಭೀಮಃ** – ಶತ್ರುಗಳಿಗೆ ಅತಿಭಯಂಕರರು, ಸಜ್ಜನರಿಗೆ ಅಭಯವನ್ನು ಕೊಡುವವರು, ಶತ್ರುಭಯಂಕರತ್ವಾತ್=ಭೀಮಃ, ಭೀಃ ಮಾ ಇತಿ ಸಾಂತ್ವಯತಿ ಇತಿ ಭೀಮಃ।

೨. **ಭೀಮಸೇನಃ** – ಅಭಯವನ್ನು ಕೊಡುತ್ತಾ, ತನ್ನ ಒಡೆಯನೊಂದಿಗೆ ಸದಾ ಇರುವವನು. ಇನೇನ ಸಹ ಇತಿ ಸೇನಃ, ಭೀಮಶ್ಚಾಸೌ ಸೇನಶ್ಚ ।

೩. **ಮಾರುತಿಃ** – ಎಲ್ಲಾ ಪ್ರಾಣವುಳ್ಳವರೂ ಬದುಕಲು ಕಾರಣರಾದವರು.

೪. **ಪಾಂಡುನಂದನಃ** – ಪಾಂಡುರಾಜನಿಗೆ ಸಂತೋಷ ಉಂಟುಮಾಡಿದವರು, ಪಾಂಡುವಿನ ಮಗ.

೫. **ವೃಕೋದರಃ** – ವೃಕನಾಮಕಾಗ್ನಿ ಹೊಟ್ಟೆಯಲ್ಲುಳ್ಳವರು. ವೃಕಃ ಉದರೇ ಯಸ್ಯ ಸಃ ಅಂದರೆ, ಅಂಗುಷ್ಠ ಪರಿಮಾಣವುಳ್ಳ ಅಗ್ನಿ, ಪ್ರಾಣದೇವರ ಉದರದಲ್ಲಿದೆ.

೬. **ಗದಾಪಾಣಿಃ** – ಗದೆಯೆಂಬ ಆಯುಧವನ್ನು ಕೈಯಲ್ಲಿ ಧರಿಸಿದವರು.

೭. **ಕುಂತೀಪುತ್ರಃ** – ಕುಂತಿಯ ಮಗ, ತಾನು ಮಗನಾಗುವ ಮೂಲಕ ಕುಂತಿಯನ್ನು ಪುತ್‌ನಾಮಕ ನರದಿಂದ ಪಾರು ಮಾಡಿದವರು.

೮. **ಮಹಾಬಲಃ** – ಲಕ್ಷ್ಮೀನಾರಾಯಣರನ್ನುಳಿದು ಇತರ ದೇವತೆಗಳಿಗಿಂತ ದೊಡ್ಡದಾದ ಸಾಮರ್ಥ್ಯವುಳ್ಳವರು.

೯. **ವೇದವೇದಾಂಗತತ್ತ್ವಜ್ಞಃ** – ವೇದ, ವೇದಾಂಗಗಳ ನಿಜವಾದ ಅರ್ಥವನ್ನು ಸರಿಯಾಗಿ ತಿಳಿದವರು.

೧೦. **ಧನುರ್ವೇದವಿಶಾರದಃ** – ಧನುರ್ವಿದ್ಯಾನಿಪುಣರಾದವರು.

೧೧. **ಸರ್ವಶಾಸ್ತ್ರಾರ್ಥತತ್ತ್ವಜ್ಞಃ** – ಎಲ್ಲಾ ಶಾಸ್ತ್ರಾಭಿಧೇಯ ಯಥಾರ್ಥಜ್ಞಾನವುಳ್ಳವರು.

೧೨. **ವದಾನ್ಯಃ** – ಮಹಾಭಾರತದಲ್ಲಿ ಪಾಂಡವರಲ್ಲಿ ಎಲ್ಲರಿಗಿಂತ ಹೆಚ್ಚಾಗಿ ದಾನವಿತ್ತವರು. ಧರ್ಮರಾಜ ದಾನಕ್ಕಾಗಿ 'ನಾಳೆ ಬಾ' ಎಂದ ಬ್ರಾಹ್ಮಣನಿಗೆ ಅಂದೇ, ಕೂಡಲೇ ತನ್ನ ಹಸ್ತಾಭರಣವನ್ನಿತ್ತವರು.

೧೩. **ಪೌರವಾಗ್ರಣೀಃ** – ಪುರುವಂಶದಲ್ಲೇ ಬಲ–ಜ್ಞಾನ–ಹರಿಭಕ್ತಿಗಳಲ್ಲಿ ಮುಂಚೂಣಿಯಲ್ಲಿದ್ದವರು.

೧೪. **ಕೃಷ್ಣದಯಿತಃ** – ಶ್ರೀಕೃಷ್ಣದೇವರಿಗೆ ಅತ್ಯಂತ ಪ್ರೀತಿಪಾತ್ರರಾದವರು.

೧೫. **ಶ್ರೀಮಾನ್** – ಭಾರತೀದೇವಿಯನ್ನು ಹೆಂಡತಿಯಾಗಿ ಹೊಂದಿರುವವರು.

೧೬. **ಅರ್ಜುನಾಭೀಷ್ಟಸಾಧಕಃ** – ಅರ್ಜುನನ ಇಚ್ಛೆಯನ್ನು ಪೂರೈಸಿದವರು.

೧೭. **ಯುಧಿಷ್ಠಿರಪ್ರತಿಷ್ಠಾತಾ** – ಇಂದ್ರಪ್ರಸ್ಥದಲ್ಲಿ, ರಾಜಸೂಯಯಾಗಾದಿ ಸಂದರ್ಭಗಳಲ್ಲಿ ಅಣ್ಣನಾಗಿ ಹುಟ್ಟಿದ ಧರ್ಮರಾಯನನ್ನು ಮುಖ್ಯ ಅಧಿಕಾರಿಯನ್ನಾಗಿಸಿದವರು.

೧೮. **ಸಹದೇವವರಪ್ರದಃ** – ಸಹದೇವನಿಗೆ ಅನುಗ್ರಹಿಸಿದವರು.

೧೯. **ನಕುಲಾಭೀಷ್ಟದಾತಾ** – ನಕುಲನ ಇಚ್ಛೆಯನ್ನು ಪೂರೈಸಿದವರು; ನಕುಲನಿಗೂ ಅನೇಕ ಬಾರಿ ಸಹಕರಿಸುತ್ತಾ, ಸಲಹಿದವರು.

೨೦. **ಕೃಷ್ಣಪಾದಾಂಬುಜಾಶ್ರಯಃ** – ಶ್ರೀಕೃಷ್ಣದೇವರ ಪಾದಕಮಲಗಳನ್ನು ಆಶ್ರಯಿಸಿದವರು.

೨೧. **ಜಿತಚೇದಿಪತಿಃ** – ಚೇದಿರಾಜನಾದ ಶಿಶುಪಾಲನನ್ನು ಗೆದ್ದವರು.

೨೨. **ದಂತವಕ್ರಗರ್ವಾಪಹಾರಕಃ** – ದಂತವಕ್ರನ ಅಹಂಕಾರವನ್ನು ಮುರಿದವರು.

೨೩. **ಜಿತಸೌಭಪತಿಃ** – ಸೌಭಪತಿಯಾದ ಸಾಲ್ವನನ್ನು ಸೋಲಿಸಿದವರು.

೨೪. **ಹಂಸಜೇತಾ** – ಹಂಸನನ್ನು ಗೆದ್ದವರು.

೨೫. **ಡಿಭಕದರ್ಪಘ್ನಃ** – ಡಿಭಕನ ಮದವನ್ನು ಕೊಂದವರು.

೨೬. **ಜಿತೈಕಲವ್ಯಃ** – ಏಕಲವ್ಯನನ್ನು ಸೋಲಿಸಿದವರು.

೨೭. **ದುರ್ಧರ್ಷಃ** – ಶತ್ರುಬಲಕ್ಕೆ ಎಂದೆಂದೂ ಮಣಿಯದೆ ಅವರಿಗೆ ದುಃಖವನ್ನು ಕೊಡುವವರು.

೨೮. **ಪೌಂಡ್ರಕದರ್ಪಘ್ನಃ** – ಪೌಂಡ್ರಕವಾಸುದೇವನ ಅಹಂಕಾರವನ್ನು ನಾಶ ಮಾಡಿದವರು.

೨೯. **ಜಿತರುಗ್ಮೀ** – ರುಗ್ಮಿಯನ್ನು ಸೋಲಿಸಿದವರು.

೩೦. **ಮದ್ರರಾಜಜೇತಾ** – ಮದ್ರರಾಜನಾದ ಶಲ್ಯನನ್ನು ಗೆದ್ದವರು.

೩೧. **ಸತ್ಯಪರಾಕ್ರಮಃ** – ಸಜ್ಜನರಿಗೆ ಹಿತವನ್ನುಂಟುಮಾಡುವ ಸಾಮರ್ಥ್ಯವುಳ್ಳವರು.

೩೨. **ಪುರೋಚನಪ್ರದಗ್ಧಾ** – ತನ್ನನ್ನು ಸುಡಬೇಕೆಂದಿದ್ದ ಪುರೋಚನನನ್ನೇ ಸುಟ್ಟವರು.

೩೩. **ಹಿಡಿಂಬವಧಕಾರಕಃ** – ಹಿಡಿಂಬನ ನಾಶವನ್ನು ಮಾಡಿದವರು.

೩೪. **ಹಿಡಿಂಬೀಪ್ರಿಯಭರ್ತಾ** – ವ್ಯಾಸರ (ಅಜ್ಜನ) ಮಾತಿಗೆ ಮಣಿದು ಹಿಡಿಂಬೆಯ ಕೈಹಿಡಿದ ಒಲವಿನ ಪತಿ.

೩೫. **ಸರ್ವಾಭೀಷ್ಟಸುರದ್ರುಮಃ** – ಎಲ್ಲರ ಇಚ್ಛೆಗೆ ಕಲ್ಪವೃಕ್ಷದಂತಿರುವವರು.

೩೬. **ವಿಪುಲಾಂಸಃ** – ಹೆಗಲುಗಳೆರಡರಲ್ಲಿ ಅನಂತಬಲವುಳ್ಳವರು.

೩೭. **ಮಹಾಬಾಹುಃ** – ಲಕ್ಷಣಭರಿತಗಳಾದ ದೊಡ್ಡ ತೋಳುಗಳುಳ್ಳವರು.

೩೮. **ಕಂಬುಗ್ರೀವಃ** – ಶಂಖದಂತಹ ಕೊರಳುಳ್ಳವರು.

೩೯. **ಮಹಾಹನುಃ** – ದೊಡ್ಡದಾದ ಕೆನ್ನೆಯ ಮೇಲ್ಭಾಗವುಳ್ಳವರು. (ಹನುಮಂತನೇ ಭೀಮಸೇನದೇವರು ಎಂಬ ಸೂಚಕ ಲಕ್ಷಣನಾಮ.)

೪೦. **ಮಹೋರಸ್ಕಃ** – ವಿಶಾಲವಾದ ಎದೆಯುಳ್ಳವರು.

೪೧. **ಮಹೇಷ್ವಾಸಃ** – ಪ್ರಭಾವಶಾಲಿಯಾದ ಬಿಲ್ಲಿದ್ದವರು.

೪೨. **ಸ್ವರ್ಣಭಾಃ** – ಬಂಗಾರದ ಬಣ್ಣವುಳ್ಳವರು.

೪೩. **ಶುಭಲಕ್ಷಣಃ** – ಮಂಗಳಕರ ಚಿಹ್ನೆಗಳುಳ್ಳವರು. ೩೨ ಲಕ್ಷಣಗಳಿಂದ ಕೂಡಿದ್ದವರು.

೪೪. **ಪೀನವಕ್ಷಾ** – ಪುಷ್ಟಗಳಾದ ಎದೆಭಾಗವಿದ್ದವರು. (೩೨ ಲಕ್ಷಣಗಳಲ್ಲಿ ಒಂದು)

೪೫. **ವಿಶಾಲಾಕ್ಷಃ** – ಆಯತಗಳಾದ, ಅಗಲ ಕಣ್ಣುಗಳಿದ್ದವರು. (೩೨ ಲಕ್ಷಣಗಳಲ್ಲಿ ಒಂದು)

೪೬. **ಸುವ್ಯಕ್ತಶ್ಮಶ್ರುಮಂಡಲಃ** – ಸ್ಪಷ್ಟವಾಗಿದ್ದ ಮೀಸೆಗಳಿಂದ ಕೂಡಿದ್ದವರು.

೪೭. **ಸೌಂದರ್ಯಜಿತಕಂದರ್ಪಃ** – ಚಂದದಲ್ಲಿ ಕಾಮನನ್ನು ಗೆದ್ದವರು.

೪೮. **ದೋಷದೂರಸುರದ್ರುಮಃ** – ದೋಷಗಳಿಂದ ರಹಿತನಾದ ಕಲ್ಪವೃಕ್ಷನೀತ.

೪೯. **ಘಟೋತ್ಕಚಾಭೀಷ್ಟದಾಯೀ** – ಘಟೋತ್ಕಚನಿಗೆ ತಂದೆಯಾಗಿ, ಅವನ ಇಷ್ಟವನ್ನು ಕೊಟ್ಟವರು.

೫೦. **ವ್ಯಾಸಪಾದಾಂಬುಜಾಶ್ರಯಃ** – ವ್ಯಾಸರ ಪದಪದ್ಮಗಳ ಸೇವಕರು.

೫೧. **ಬಕರಾಕ್ಷಸಸಂಹಾರೀ** – ಜರಾಸಂಧ, ನರಕಾಸುರ, ಭರತರಿಗೆ ಮಣಿಯದೆ ಬಕನೆಂಬ ಅಸುರನನ್ನು ಕೊಂದವರು.

೫೨. **ಸಾಧುಸಾಧ್ವಸನಾಶನಃ** – ಸಜ್ಜನರ ಭಯವನ್ನು ದೂರಮಾಡಿದವರು.

೫೩. **ದ್ರೌಪದೀಪ್ರಾಣನಾಥಃ** – ದ್ರೌಪದೀದೇವಿಯ ನಿಜಪತಿಯು.

೫೪. **ಕಾಲೀದೇವೀಷ್ಟದಾಯಕಃ** – ಭಾರತೀದೇವಿಯದ್ದೇ ಇನ್ನೊಂದು ರೂಪವಾದ ಕಾಲೀದೇವಿಯ ಕೈಹಿಡಿದು ಅವಳ ಅಭೀಷ್ಟಗಳನ್ನು ನೆರವೇರಿಸಿದವನು.

೫೫. **ಇಂದ್ರಪ್ರಸ್ಥಕೃತಾವಾಸಃ** – ಇಂದ್ರಪ್ರಸ್ಥದಲ್ಲಿ ನೆಲೆಸಿದವರು.

೫೬. **ಪೌರಜಾನಪದಪ್ರಿಯಾಯ ನಮಃ** – ಪೌರರಿಗೆ ಮತ್ತು ದೇಶವಾಸಿಗಳಿಗೆ ಪ್ರೀತಿಪಾತ್ರರು.

೫೭. **ದೀನಾನುಕಂಪೀ** – ದುಃಖಿತರಲ್ಲಿ ದಯೆಯುಳ್ಳವರು.

೫೮. **ಧೃತಿಮಾನ್** – ಧಾರಣಶಕ್ತಿಯುಳ್ಳವರು.

೫೯. **ವಶೀ** – ಭಗವಂತನ ವಶರಾದವರು.

೬೦. **ತ್ರೈಲೋಕ್ಯವಿಶ್ರುತಃ** – ಮೂರು ಲೋಕಗಳಲ್ಲಿ ಪ್ರಸಿದ್ಧರು.

೬೧. **ಪ್ರಿಯಂವದಃ** – ಸಜ್ಜನರಲ್ಲಿ ಪ್ರೀತಿಯ ಮಾತುಗಳನ್ನಾಡುವವರು; ದೇವರಿಗೆ ಪ್ರೀತಿಪಾತ್ರವಾದ, ಸರಿಯಾದ ಮಾತುಗಳನ್ನಾಡುವವರು.

೬೨. **ಧರ್ಮರತಃ** – ಹರಿಧರ್ಮನಿಷ್ಠರು. (ಇತರ ದೇವತೆಗಳಿಗಿಂತ ಹೆಚ್ಚು.)

೬೩. **ಬ್ರಾಹ್ಮಣಪ್ರತಿಪೂಜಕಃ** – ಬ್ರಹ್ಮಜ್ಞಾನಿಗಳ ಆರಾಧಕರು.

೬೪. **ಜರಾಸಂಧಾಂತಕೃತಃ** – ಜರಾಸಂಧನನ್ನು ಕೊನೆಗೊಳಿಸಿದವರು.

೬೫. **ವೀರಃ** – ಶೂರರಾದವರು.

೬೬. **ಪ್ರಧಾನಪುರುಷೋತ್ತಮಃ** – ಜೀವರಲ್ಲಿ ಮುಖ್ಯಶ್ರೇಷ್ಠರು.

೬೭. **ಕೃಷ್ಣಬಾಹುಸಮಾಶ್ಲಿಷ್ಟಃ** – ದೇವರ ಕೃಷ್ಣರೂಪದ ತೋಳಬಂಧಿಯಾದವರು.

೬೮. **ಗುಡಾಕೇಶಾಭಿವಂದಿತಃ** – ಅರ್ಜುನನಿಂದ ನಮಸ್ಕರಿಸಲ್ಪಟ್ಟವರು.

೬೯. **ಜಿತೇಂದ್ರಿಯಃ** – ಇಂದ್ರಿಯಗಳನ್ನು ಗೆದ್ದವರು; ಇಂದ್ರಿಯಾಭಿಮಾನಿದೇವತೆಗಳನ್ನು ಗೆದ್ದವರು.

೭೦. **ಜಿತಾಶೇಷಃ** – ಎಲ್ಲರನ್ನೂ ಗೆದ್ದವರು.

೭೧. **ಜಿತವೀಂದ್ರಃ** – ಗರುಡನನ್ನೂ ವೇಗದಲ್ಲಿ ಗೆದ್ದವರು.

೭೨. **ಜಿತೇಶ್ವರಃ** – ರುದ್ರದೇವರನ್ನು ಗೆದ್ದವರು. (೧) ಅಶ್ವತ್ಥಾಮಾದಿ ರೂಪಗಳಲ್ಲಿದ್ದ ರುದ್ರದೇವರನ್ನು ಗೆದ್ದವರು (೨) ಭೂಮಿಯ ಎಲ್ಲಾ ರಾಜರನ್ನೂ ಗೆದ್ದವರು.

೭೩. **ಜಿತಬಾಣಃ** – ಬಾಣನನ್ನು ಗೆದ್ದವರು.

೭೪. **ಜಿತಾಮಿತ್ರಃ** – ಶತ್ರುಗಳನ್ನು ಗೆದ್ದವರು.

೭೫. **ಜಿತಕರ್ಣಃ** – ಕರ್ಣನನ್ನು ಗೆದ್ದವರು.

೭೬. **ಮಹಾರಥಃ** – ದೊಡ್ಡ ರಥವನ್ನು ಹೊಂದಿದವರು.

೭೭. **ರಾಜೇಂದ್ರಃ** – ರಾಜರಿಗೆಲ್ಲರಿಗೂ ಶ್ರೇಷ್ಠರು.

೭೮. **ಸತ್ಯಸಂಕಲ್ಪಃ** – ದೃಢವಾದ (ನಿಜವಾದ) ಮಾನಸಕರ್ಮಗಳುಳ್ಳವರು.

೭೯. **ರಾಜಸೂಯಾಶ್ವಮೇಧಕೃತ್** – ರಾಜಸೂಯ, ಅಶ್ವಮೇಧಾದಿಯಾಗಗಳನ್ನು ಮಾಡಿದವರು.

೮೦. **ಕಿರ್ಮೀರಪ್ರಾಣಹರ್ತಾ** – ಕಿರ್ಮೀರ ಪ್ರಾಣಹಾರಕರು.

೮೧. **ಮಣಿಮದ್ವಧಪಂಡಿತಃ** – ಮಣಿಮಂತ ರಾಕ್ಷಸನನ್ನು ಕೊಂದ ನಿಸ್ಸೀಮರು.

೮೨. **ತ್ರಿಕೋಟಿತ್ರಿಮಹತ್ಪದ್ಮರಾಕ್ಷಸೇಂದ್ರನಿಷೂದನಃ** – ಮೂರು ಕೋಟಿ ಕ್ರೋಧವಶರು, ಮೂರು ಮಹತ್ಪದ್ಮ ರಾಕ್ಷಸರ ಹಂತಕರು.

೮೩. **ಸುರಪ್ರಸೂನಾಭಿವೃಷ್ಟಃ** – ದೇವತೆಗಳಿಂದ ಹೂಗಳಿಂದ ಮಳೆಗರೆಯಲ್ಪಟ್ಟವರು.

೮೪. **ದ್ರೌಪದೀಪ್ರಿಯಪುಷ್ಪದಃ** – ದ್ರೌಪದಿಗೆ ಇಷ್ಟವಾದ ಸೌಗಂಧಿಕಾಪುಷ್ಪ ವನ್ನು ತಂದವರು.

೮೫. **ವಿರಾಟನಗರಾವಾಸೀ** – ವಿರಾಟನ ಪಟ್ಟಣದಲ್ಲಿ ವಾಸಿಸುತ್ತಿದ್ದವರು.

೮೬. **ಮಲ್ಲಯುದ್ಧವಿಶಾರದಃ** – ವಿರಾಟನಗರದಲ್ಲಿ ನಡೆದ ಮಲ್ಲಯುದ್ಧದಲ್ಲಿ ಪಂಡಿತರೆನಿಸಿಕೊಂಡವರು.

೮೭. **ಕೀಚಕಸಂಹಾರೀ** – ಕೀಚಕನಾಶಕರು. (ಕಾಮಿಯಾದ ಕೀಚಕನನ್ನು ಕೊಂದು ಕಾಮನನ್ನೇ ಜಯಿಸಿದವರು.)

೮೮. **ಜಿತಸರ್ವಮನೋರಥಃ** – ಎಲ್ಲರ ಮನಸ್ಸಿನ ಇಚ್ಛೆಗಳನ್ನು ಗೆದ್ದವರು.

೮೯. **ಜಿತಭೀಷ್ಮಃ** – ಏಳನೆಯ ದಿನದಲ್ಲಿ, ಇತರ ದಿನಗಳಲ್ಲಿಯೂ ಭೀಷ್ಮರನ್ನು ಗೆದ್ದವರು.

೯೦. **ಜಿತದ್ರೋಣಃ** – ಯುದ್ಧದಲ್ಲಿ ದ್ರೋಣರನ್ನು ಗೆದ್ದವರು.

೯೧. **ದ್ರೌಣಿದರ್ಪವಿನಾಶಕಃ** – ಅಶ್ವತ್ಥಾಮನ ಮದವನ್ನು ದಮನ ಮಾಡಿದವರು.

೯೨. **ಕೃಪಾಚಾರ್ಯವಿಜೇತಾ** – ಕೃಪಾಚಾರ್ಯರನ್ನು, ಅವರಲ್ಲಿ ಧನುರ್ವಿದ್ಯೆಯನ್ನು ಕಲಿಯುವ ಮೂಲಕ, ಅವರ ಮನಸ್ಸನ್ನು ಗೆದ್ದವರು.

೯೩. **ಭಗದತ್ತಜಯೀ** – ಭಗದತ್ತನನ್ನು ಗೆದ್ದವರು.

೯೪. **ಜಿತಭೂರಿಶ್ರವಾಃ** – ಭೂರಿಶ್ರವನನ್ನು ಸೋಲಿಸಿದವರು.

೯೫. **ಸಿಂಹಧ್ವಜಃ** – ಸಿಂಹದ ಚಿಹ್ನೆಯು ಧ್ವಜವಾಗುಳ್ಳವರು.

೯೬. **ಅಲಂಬುಸದರ್ಪಘ್ನಃ** – ೧೪ನೆಯ ದಿನದ ಕುರುಕ್ಷೇತ್ರಯುದ್ಧದಲ್ಲಿ ಹಗಲು ಸಾಲಕಟಂಕಟ ಎಂಬ ಇನ್ನೊಂದು ಹೆಸರುಳ್ಳ, ಅಲಂಬುಸನೆಂಬ ಬಕಾಸುರನ ತಮ್ಮನನ್ನು ಸೋಲಿಸಿ ಆತನ ಅಹಂಕಾರವನ್ನು ಅಂತ್ಯಗೊಳಿಸಿದವರು.

೯೭. **ಬಾಹ್ಲೀಕವಧಕರ್ತಾ** – ಭೀಮನಿಂದಲೇ ಕೊಲ್ಲಲ್ಪಡಬೇಕೆಂದು ಬಯಸಿದ್ದ ಬಾಹ್ಲೀಕನ ಸಂಹಾರಕರು.

೯೮. **ದುಃಶಾಸನವಿನಾಶನಃ** – ದುಃಶಾಸನನನ್ನು ಸಂಹರಿಸಿದವರು.

೯೯. **ಸತ್ಯಸಂಧಃ** – ಸತ್ಯದಲ್ಲಿ ರತರು.

೧೦೦. **ಮಹಾತೇಜಾಃ** – ಉತ್ತಮ ತೇಜಸ್ಸುಳ್ಳವರು.

೧೦೧. **ದುರ್ಯೋಧನವಿನಾಶಕೃತ್** – ದುರ್ಯೋಧನಹಂತಕರು.

೧೦೨. **ಷಟ್ಸಂಖ್ಯಾಕ್ಷೋಹಿಣೀಹಂತಾ** – ಆರು ಅಕ್ಷೋಹಿಣೀಸಂಖ್ಯೆಯಷ್ಟು ಜನರನ್ನು ಕೊಂದವರು; ಕುರುಕ್ಷೇತ್ರದಲ್ಲಿ ಸಮರ್ಥವಾಗಿ ಹೋರಾಡುತ್ತಾ ರಾಕ್ಷಸ ನಿರ್ನಾಮ ಮಾಡಿದವರು. (ಒಂದು ಅಕ್ಷೋಹಿಣೀ ಎಂದರೆ, ೨೧,೮೭೦ ಆನೆಗಳು, ೨೧,೮೭೦ ರಥಗಳು, ೬೫,೬೧೦ ಕುದುರೆಗಳು, ೧,೦೯,೩೫೦ ಕಾಲಾಳುಗಳು.)

೧೦೩. **ಪೃಥ್ವೀಭಾರವಿನಾಶನಃ** – ಶ್ರೀಕೃಷ್ಣದೇವರೊಂದಿಗೆ ರಾಕ್ಷಸ ಸಂಹಾರ ಮಾಡಿ ಭೂಮಿಯ ಭಾರಹರಣ ಮಾಡಿದವರು.

೧೦೪. **ಕೃಷ್ಣಾಕಾಲೀಸಮಾಶ್ಲಿಷ್ಟಃ** – ದ್ರೌಪದೀ–ಕಾಲೀಯರಿಂದ ಆಲಿಂಗಿತರಾದವರು.

೧೦೫. **ನಾನಾಭರಣಭೂಷಿತಃ** – ವಿವಿಧ ಆಭರಣಗಳಿಂದ ಅಲಂಕೃತರಾದವರು.

೧೦೬. **ವಾಣೀಗರುಡಶೇಷೇಶಶಕ್ರಪೂರ್ವಸುರಾರ್ಚಿತಃ** – ಸರಸ್ವತೀ, ಗರುಡ, ಶೇಷ,

ರುದ್ರ, ಇಂದ್ರರೇ ಮೊದಲಾದ ದೇವತೆಗಳಿಂದ ಪೂಜಿಸಲ್ಪಡುವವರು. ಜೀವೋತ್ತಮರೆಂದರ್ಥ.

೧೦೭. **ತ್ರಯೋವಿಂಶತ್ಸುತರುಣೀಪತಿಃ** – ೨೩ ಉತ್ತಮ ಸ್ತ್ರೀಯರ ಒಡೆಯರು.

೧೦೮. **ಆನಂದವಾರಿಧಿಃ** – ಸುಖಸಾಗರನು; ಆನಂದದ ಕಡಲು ತಾನಾಗಿದ್ದು ತನಗೋ ಅತ್ಯಂತ ಪ್ರೀತಿಪಾತ್ರರಾದ ನಾರಾಯಣದೇವರನ್ನು ಅವತಾರಕಾಲದಲ್ಲೂ ತಮ್ಮ ಭಕ್ತಿಯಿಂದ ಸಂತೋಷಪಡಿಸಿದವರು.

* * *

### ಶ್ರೀರಘುಪ್ರವೀರತೀರ್ಥವಿರಚಿತಂ

## ಶ್ರೀಮಧ್ವಾಷ್ಟೋತ್ತರಶತನಾಮಸ್ತೋತ್ರಮ್

ಶ್ರೀಮದಾನಂದತೀರ್ಥಾಯ ಕಲ್ಯಾಣಗುಣರಾಶಯೇ ।
ಸರ್ವದೋಷಾತಿದೂರಾಯ ನಮೋ ಮಸ್ಕರಿಮೌಲಯೇ ॥ ೧ ॥

ವಾಸುದೇವೋ ಮಹಾತೇಜಾ ಮಧ್ಯಗೇಹಾರ್ಯನಂದನಃ ।
ಗೋದಾತೃಮೋಕ್ಷದಾತಾ ಚ ರೌಪ್ಯಪೀಠೇಶಸೇವಕಃ ॥ ೨ ॥

ಭೂತಮಾನ್ಯಶ್ಚ ಸಹಜಾಕುಲಿತ್ಥಕುಲತರ್ಪಿತಃ ।
ಗೋಪುಚ್ಛಲಂಬನಃ ಶ್ರೀಮಾನ್ ಬಾಲಲೀಲಾವಿಲಾಸವಾನ್ ॥ ೩ ॥

ವೃಷಕ್ರಯೀ ಜೀರ್ಣಚೇಲಃ ಪ್ರಮೋದೀ ಲೋಕಸುಂದರಃ ।
ರಮಾಲಾಲ್ಯಶ್ಚ ಸರ್ವಜ್ಞಃ ತಾತವಿಸ್ಮಯಕಾರಕಃ ॥ ೪ ॥

ಶಿವಜೇತಾ ದುರ್ಗಮಾರ್ಥವಕ್ತಾ ಭುಜಗದರ್ಪಹಾ ।
ಸ್ವಸಖಿಸ್ಯ ಶಿರಃಶೂಲನಾಶನೋ ಭವರೋಗಹಾ ॥ ೫ ॥

ಸ್ವೋಪಾಧ್ಯಾಯಜ್ಞಾನದಾತಾ ವ್ಯಾಸಶಿಷ್ಯೋ ಯತೀಶ್ವರಃ ।
ಅಚ್ಯುತಪ್ರೇಕ್ಷವರದೋ ಮಹಾತೀರ್ಥಜಗದ್ಗುರುಃ ॥ ೬ ॥

ಆನಂದತೀರ್ಥಃ ಶ್ರೀಮಧ್ವಃ ತತ್ತ್ವಜ್ಞೋ ವೈಷ್ಣವಾಗ್ರಣೀಃ ।
ಸರ್ವದುರ್ವಾದಿದಂತೀಂದ್ರಮೃಗೇಂದ್ರೋ ಜಯಪತ್ರವಾನ್ ॥ ೭ ॥

ವಾದಿಸಿಂಹವಿಜೇತಾ ಚ ಬುದ್ಧಿಸಾಗರದರ್ಪಹಾ ।
ವಿಶ್ವಾದಿವಿಷ್ಣುನಾಮಾರ್ಥಶತಪ್ರವಚನಪ್ರಭುಃ ॥ ೮ ॥

ವೇದವೇದಾಂತತತ್ತ್ವಜ್ಞೋ ಸರ್ವವಿದ್ವಚ್ಛಿಖಾಮಣಿಃ ।
ದ್ವಾತ್ರಿಂಶಲ್ಲಕ್ಷಣೋಪೇತೋ ವಿಭೂಷೋ ವಿಶ್ವಭೂಷಣಃ ॥ ೯ ॥

ವೇದವ್ಯಾಸಮತಾಂಬೋಧಿಪೂರ್ಣಚಂದ್ರೋ ಗುಣಾರ್ಣವಃ ।
ಪೂರ್ಣಪ್ರಜ್ಞೋ ಜ್ಞಾನದಾತಾ ಮಾನಲಕ್ಷಣಕಾರಕಃ ॥ ೧೦ ॥

ತತ್ತ್ವಸಂಖ್ಯಾನಕರ್ತಾ ಚ ಶ್ರೀಮತ್ತತ್ತ್ವವಿವೇಕಕೃತ್ ।
ಖಂಡನತ್ರಯಕರ್ತಾ ಚ ಶ್ರೀತತ್ತ್ವೋದ್ಯೋತಕಾರಕಃ ॥ ೧೧ ॥

ತತ್ತ್ವನಿರ್ಣಯಕರ್ತಾ ಚ ಕರ್ಮನಿರ್ಣಯಕಾರಕಃ ।
ಕಥಾಲಕ್ಷಣಕರ್ತಾ ಚ ಶ್ರೀಗೀತಾಭಾಷ್ಯಕಾರಕಃ ॥ ೧೨ ॥

ಗೀತಾತಾತ್ಪರ್ಯಕರ್ತಾ ಚ ಶ್ರೀಮದೃಗ್ಭಾಷ್ಯಕಾರಕಃ ।
ಶ್ರೀಸೂತ್ರಭಾಷ್ಯಕರ್ತಾ ಚ ಹ್ಯಣುವೇದಾಂತಕಾರಕಃ ॥ ೧೩ ॥

ಅನುವ್ಯಾಖ್ಯಾನಕರ್ತಾ ಚ ಧ್ವಸ್ತಸರ್ವದುರಾಗಮಃ ।
ಸನ್ನ್ಯಾಯವಿವೃತಿಗ್ರಂಥಕರ್ತಾ ತ್ರೈಲೋಕ್ಯವಿಶ್ರುತಃ ॥ ೧೪ ॥

ಶ್ರೀತಂತ್ರಸಾರಕರ್ತಾ ಚ ದ್ವಾದಶಸ್ತೋತ್ರಕಾರಕಃ ।
ಶ್ರೀಮತ್ಪ್ರಣವಕಲ್ಪಾಖ್ಯಗ್ರಂಥಕರ್ತಾ ದಯಾನಿಧಿಃ ॥ ೧೫ ॥

ಜಯಂತೀಕಲ್ಪಕರ್ತಾ ಚ ನಖಸ್ತವನಕಾರಕಃ ।
ಗೋಪ್ಯಭಾರತಸಂಕ್ಷೇಪಕರ್ತಾ ಕವಿಕುಲಾಗ್ರಣೀಃ ॥ ೧೬ ॥

ಸ್ವಭಕ್ತಕರುಣಾಚೀರ್ಣಕೃಷ್ಣಾಮೃತಮಹಾರ್ಣವಃ ।
ಸದಾಚಾರಸ್ಮೃತಿಗ್ರಂಥಕರ್ತಾ ಪವನನಂದನಃ ॥ ೧೭ ॥

ಶ್ರೀಭಾಗವತತಾತ್ಪರ್ಯನಿರ್ಣಯಗ್ರಂಥಕಾರಕಃ ।
ಈಶಾವಾಸ್ಯಾದ್ಯುಪನಿಷದ್ಭಾಷ್ಯಕರ್ತಾ ಜಿತೇಂದ್ರಿಯಃ ॥ ೧೮ ॥

ಶತಾಧಿಕಗ್ರಂಥಕರ್ತಾ ಶರಣ್ಯತ್ರಾಣತತ್ಪರಃ ।
ಬಾಲಕೃಷ್ಣಪ್ರತಿಷ್ಠಾತಾ ಬಾಲಕರ್ಮಂದ್ಯಭೀಷ್ಟದಃ ॥ ೧೯ ॥

ಗಂಗಾತಾರೀ ಚಿತ್ರಕರ್ಮಾ ಮ್ಲೇಚ್ಛರಾಜೇಂದ್ರಪೂಜಿತಃ ।
ಜಯಸಿಂಹಸಮಾರಾಧ್ಯಃ ಶಂಕರಾರ್ಯವರಪ್ರದಃ ॥ ೨೦ ॥

ತ್ರಿವಿಕ್ರಮಾರ್ಯವಿಜಯೀ ತ್ರಿವಿಕ್ರಮಸುಪೂಜಿತಃ ।
ತ್ರಿವಿಕ್ರಮಾಭೀಷ್ಟದಾತಾ ಹೃಷೀಕೇಶಾರ್ಯಸೇವಿತಃ ॥ ೨೧ ॥

ನೃಸಿಂಹತೀರ್ಥವರದೋ ಜನಾರ್ದನವರಪ್ರದಃ ।
ಉಪೇಂದ್ರತೀರ್ಥವರದೋ ವಾಮನಾರ್ಯವರಪ್ರದಃ ॥ ೨೨ ॥

ಶ್ರೀವಿಷ್ಣುತೀರ್ಥವರದೋ ರಾಮತೀರ್ಥವರಪ್ರದಃ ।
ಅಧೋಕ್ಷಜಾರ್ಯವರದಃ ಪದ್ಮನಾಭಾರ್ಯಸೇವಿತಃ ॥ ೨೩ ॥

ನಾರಾಯಣಾರ್ಯವರದೋ ನೃಸಿಂಹಾರ್ಯವರಪ್ರದಃ ।
ಅಕ್ಷೋಭ್ಯತೀರ್ಥವರದೋ ಮಾಧವಾರ್ಯವರಪ್ರದಃ ॥ ೨೪ ॥

ಜಯತೀರ್ಥಾರ್ಯವರದೋ ವ್ಯಾಸಪಾದಾಂಬುಜಾಶ್ರಯಃ ।
ರಾಮಚಂದ್ರಪ್ರಿಯಃ ಸಾಧುಭಕ್ತಮೋಕ್ಷವರಪ್ರದಃ ॥ ೨೫ ॥

ಷಟ್‌ಸಹಸ್ರಾಧಿಕತ್ರಿಂಶತ್‌ಸಹಸ್ರಾಬ್ದಸುಜೀವಿತಃ ।
ಶ್ರೀಮದ್ಬದರಿಕಾವಾಸಃ ಪೂರ್ಣಾನಂದವಿನಿರ್ಭರಃ ॥ ೨೬ ॥

ಇತಿ ಶ್ರೀಮಧ್ವಸನ್ನಾಮ್ನಾಮಷ್ಟೋತ್ತರಶತಂ ಪಠನ್ ।
ಮಹಾಪಾತಕಯುಕ್ತೋಽಪಿ ಮುಚ್ಯತೇ ತತ್ ಪ್ರಸಾದತಃ ॥ ೨೭ ॥

ಚಾರುಪ್ರಸನ್ನವದನಂ ಚಾರುಹಾಸನಿಭೇಕ್ಷಣಮ್ ।
ಶ್ರೀಮಧ್ವಂ ಸಂಸ್ಮರೇನ್ಮರ್ತ್ಯಃ ಪರತ್ರೇಹ ಚ ಮೋದತೇ ॥ ೨೮ ॥

ಏವಮಾನಂದತೀರ್ಥಸ್ಯ ನಾಮ್ನಾಮಷ್ಟೋತ್ತರಂ ಶತಮ್ ।
ರಘುಪ್ರವೀರಾಖ್ಯಯತಿಃ ಚಕಾರೇಷ್ಟಾರ್ಥಸಾಧಕಮ್ ॥ ೨೯ ॥

॥ ಇತಿ ಶ್ರೀಮಧ್ವಾಷ್ಟೋತ್ತರಶತನಾಮಸ್ತೋತ್ರಮ್ ॥

# ಶ್ರೀಮಧ್ವಾಷ್ಟೋತ್ತರಶತನಾಮಾವಲೀ

ಶ್ರೀವಾಸುದೇವಾಯ ನಮಃ ।
ಶ್ರೀಮಹಾತೇಜಸೇ ನಮಃ ।
ಶ್ರೀಮಧ್ಯಗೇಹಾರ್ಯನಂದನಾಯ ನಮಃ ।
ಶ್ರೀಗೋದಾತೃಮೋಕ್ಷದಾತ್ರೇ ನಮಃ ।
ಶ್ರೀರೌಪ್ಯಪೀಠೇಶಸೇವಕಾಯ ನಮಃ ।
ಶ್ರೀಭೂತಮಾನ್ಯಾಯ ನಮಃ ।
ಶ್ರೀಸಹಜಾಕುಲಿತ್ಥಕುಲತರ್ಪಿತಾಯ ನಮಃ ।
ಶ್ರೀಗೋಪುಚ್ಛಲಂಬನಾಯ ನಮಃ ।
ಶ್ರೀಶ್ರೀಮತೇ ನಮಃ ।
ಶ್ರೀಬಾಲಲೀಲಾವಿಲಾಸವತೇ ನಮಃ । ೧೦
ಶ್ರೀವೃಷಕ್ರಯಿಣೇ ನಮಃ ।
ಶ್ರೀಜೀರ್ಣಚೇಲಾಯ ನಮಃ ।
ಶ್ರೀಪ್ರಣೋದಿನೇ ನಮಃ ।
ಶ್ರೀಲೋಕಸುಂದರಾಯ ನಮಃ ।
ಶ್ರೀರಮಾಲಾಲ್ಯಾಯ ನಮಃ ।
ಶ್ರೀಸರ್ವಜ್ಞಾಯ ನಮಃ ।
ಶ್ರೀತಾತವಿಸ್ಮಯಕಾರಕಾಯ ನಮಃ ।
ಶ್ರೀಶಿವಜೇತ್ರೇ ನಮಃ ।
ಶ್ರೀದುರ್ಗಮಾರ್ಥವಕ್ತ್ರೇ ನಮಃ ।
ಶ್ರೀಭುಜಗದರ್ಪಘ್ನೇ ನಮಃ । ೨೦
ಶ್ರೀಸ್ವಸಖಸ್ಯ ಶಿರಃಶೂಲನಾಶನಾಯ ನಮಃ ।
ಶ್ರೀಭವರೋಗಘ್ನೇ ನಮಃ ।
ಶ್ರೀಸ್ವೋಪಾಧ್ಯಾಯಜ್ಞಾನದಾತ್ರೇ ನಮಃ ।
ಶ್ರೀವ್ಯಾಸಶಿಷ್ಯಾಯ ನಮಃ ।
ಶ್ರೀಯತೀಶ್ವರಾಯ ನಮಃ ।
ಶ್ರೀಅಚ್ಯುತಪ್ರೇಕ್ಷವರದಾಯ ನಮಃ ।
ಶ್ರೀಮಹಾತೀರ್ಥಜಗದ್ಗುರವೇ ನಮಃ ।
ಶ್ರೀಆನಂದತೀರ್ಥಾಯ ನಮಃ ।
ಶ್ರೀಮಧ್ವಾಯ ನಮಃ ।
ಶ್ರೀತತ್ತ್ವಜ್ಞಾಯ ನಮಃ । ೩೦
ಶ್ರೀವೈಷ್ಣವಾಗ್ರಣ್ಯೈ ನಮಃ ।
ಶ್ರೀಸರ್ವದುರ್ವಾದಿದಂತೀಂದ್ರ
ಮೃಗೇಂದ್ರಾಯ ನಮಃ ।
ಶ್ರೀಜಯಪತ್ರವತೇ ನಮಃ ।
ಶ್ರೀವಾದಿಸಿಂಹವಿಜೇತ್ರೇ ನಮಃ ।
ಶ್ರೀಬುದ್ಧಿಸಾಗರದರ್ಪಘ್ನೇ ನಮಃ ।
ಶ್ರೀವಿಶ್ವಾದಿವಿಷ್ಣುನಾಮಾರ್ಥಶತಪ್ರವಚನ
ಪ್ರಭವೇ ನಮಃ ।
ಶ್ರೀವೇದವೇದಾಂಗತತ್ತ್ವಜ್ಞಾಯ ನಮಃ ।
ಶ್ರೀಸರ್ವವಿದ್ವಚ್ಛಿಖಾಮಣಯೇ ನಮಃ ।
ಶ್ರೀದ್ವಾತ್ರಿಂಶಲ್ಲಕ್ಷಣೋಪೇತಾಯ ನಮಃ ।
ಶ್ರೀವಿಭೂಷಾಯ ನಮಃ । ೪೦
ಶ್ರೀವಿಶ್ವಭೂಷಣಾಯ ನಮಃ ।

ಶ್ರೀವೇದವ್ಯಾಸಮತಾಂಬೋಧಿಪೂರ್ಣ-
ಚಂದ್ರಾಯ ನಮಃ ।
ಶ್ರೀಗುಣಾರ್ಣವಾಯ ನಮಃ ।
ಶ್ರೀಪೂರ್ಣಪ್ರಜ್ಞಾಯ ನಮಃ ।
ಶ್ರೀಜ್ಞಾನದಾತ್ರೇ ನಮಃ ।
ಶ್ರೀಮಾನಲಕ್ಷಣಕಾರಕಾಯ ನಮಃ ।
ಶ್ರೀತತ್ತ್ವಸಂಖ್ಯಾನಕರ್ತ್ರೇ ನಮಃ ।
ಶ್ರೀಶ್ರೀಮತ್ತತ್ತ್ವವಿವೇಕಕೃತೇ ನಮಃ ।
ಶ್ರೀಖಂಡನತ್ರಯಕರ್ತ್ರೇ ನಮಃ ।
ಶ್ರೀತತ್ತ್ವೋದ್ಯೋತಕಾರಕಾಯ ನಮಃ । ೫೦
ಶ್ರೀತತ್ತ್ವನಿರ್ಣಯಕರ್ತ್ರೇ ನಮಃ ।
ಶ್ರೀಕರ್ಮನಿರ್ಣಯಕಾರಕಾಯ ನಮಃ ।
ಶ್ರೀಕಥಾಲಕ್ಷಣಕರ್ತ್ರೇ ನಮಃ ।
ಶ್ರೀಗೀತಾಭಾಷ್ಯಕಾರಕಾಯ ನಮಃ ।
ಶ್ರೀಗೀತಾತಾತ್ಪರ್ಯಕರ್ತ್ರೇ ನಮಃ ।
ಶ್ರೀಶ್ರೀಮದೃಗ್ಭಾಷ್ಯಕರ್ತ್ರೇ ನಮಃ ।
ಶ್ರೀಶ್ರೀಸೂತ್ರಭಾಷ್ಯಕರ್ತ್ರೇ ನಮಃ ।
ಶ್ರೀಅಣುವೇದಾಂತಕಾರಕಾಯ ನಮಃ ।
ಶ್ರೀಅನುವ್ಯಾಖ್ಯಾನಕರ್ತ್ರೇ ನಮಃ ।
ಶ್ರೀಧ್ವಸ್ತಸರ್ವದುರಾಗಮಾಯ ನಮಃ । ೬೦
ಶ್ರೀಸನ್ನ್ಯಾಯವಿವೃತಿಗ್ರಂಥಕರ್ತ್ರೇ ನಮಃ ।
ಶ್ರೀತ್ರೈಲೋಕ್ಯವಿಶ್ರುತಾಯ ನಮಃ ।
ಶ್ರೀತಂತ್ರಸಾರಕರ್ತ್ರೇ ನಮಃ ।
ಶ್ರೀದ್ವಾದಶಸ್ತೋತ್ರಕಾರಕಾಯ ನಮಃ ।
ಶ್ರೀಶ್ರೀಮತ್ಪ್ರಣವಕಲ್ಪಾಖ್ಯಗ್ರಂಥಕರ್ತ್ರೇ ನಮಃ ।
ಶ್ರೀದಯಾನಿಧಯೇ ನಮಃ ।
ಶ್ರೀಜಯಂತೀಕಲ್ಪಕರ್ತ್ರೇ ನಮಃ ।
ಶ್ರೀನಖಸ್ತವನಕಾರಕಾಯ ನಮಃ ।
ಶ್ರೀಗೋಪ್ಯಭಾರತಸಂಕ್ಷೇಪಕರ್ತ್ರೇ ನಮಃ ।
ಶ್ರೀಕವಿಕುಲಾಗ್ರಣ್ಯೈ ನಮಃ । ೭೦
ಶ್ರೀಸ್ವಭಕ್ತಕರುಣಾಚೀರ್ಣಕೃಷ್ಣಾಮೃತ-
ಮಹಾರ್ಣವಾಯ ನಮಃ ।
ಶ್ರೀಸದಾಚಾರಸ್ಮೃತಿಗ್ರಂಥಕರ್ತ್ರೇ ನಮಃ ।
ಶ್ರೀಪವನನಂದನಾಯ ನಮಃ ।
ಶ್ರೀಭಾಗವತತಾತ್ಪರ್ಯನಿರ್ಣಯ
ಗ್ರಂಥಕಾರಕಾಯ ನಮಃ ।
ಶ್ರೀಈಶಾವಾಸ್ಯಾದ್ಯುಪನಿಷದ್ಭಾಷ್ಯಕರ್ತ್ರೇ
ನಮಃ ।
ಶ್ರೀಜಿತೇಂದ್ರಿಯಾಯ ನಮಃ ।
ಶ್ರೀಶತಾಧಿಕಗ್ರಂಥಕರ್ತ್ರೇ ನಮಃ ।
ಶ್ರೀಶರಣ್ಯತ್ರಾಣತತ್ಪರಾಯ ನಮಃ ।
ಶ್ರೀಬಾಲಕೃಷ್ಣಪ್ರತಿಷ್ಠಾತ್ರೇ ನಮಃ ।
ಶ್ರೀಬಾಲಕರ್ಮಂದ್ಯಭೀಷ್ಟದಾಯ ನಮಃ ।
೮೦
ಶ್ರೀಗಂಗಾತಾರಿಣೇ ನಮಃ ।
ಶ್ರೀಚಿತ್ರಕರ್ಮಣೇ ನಮಃ ।
ಶ್ರೀಮ್ಲೇಚ್ಛರಾಜೇಂದ್ರಪೂಜಿತಾಯ ನಮಃ ।
ಶ್ರೀಜಯಸಿಂಹಸಮಾರಾಧ್ಯಾಯ ನಮಃ ।
ಶ್ರೀಶಂಕರಾರ್ಯವರಪ್ರದಾಯ ನಮಃ ।
ಶ್ರೀತ್ರಿವಿಕ್ರಮಾರ್ಯವಿಜಯಿನೇ ನಮಃ ।
ಶ್ರೀತ್ರಿವಿಕ್ರಮಸುಪೂಜಿತಾಯ ನಮಃ ।
ಶ್ರೀತ್ರಿವಿಕ್ರಮಾಭೀಷ್ಟದಾತ್ರೇ ನಮಃ ।
ಶ್ರೀಹೃಷೀಕೇಶಾರ್ಯಸೇವಿತಾಯ ನಮಃ ।

ಶ್ರೀನೃಸಿಂಹತೀರ್ಥವರದಾಯ ನಮಃ । ೯೦
ಶ್ರೀಜನಾರ್ದನವರಪ್ರದಾಯ ನಮಃ ।
ಶ್ರೀಉಪೇಂದ್ರತೀರ್ಥವರದಾಯ ನಮಃ ।
ಶ್ರೀವಾಮನಾರ್ಯವರಪ್ರದಾಯ ನಮಃ ।
ಶ್ರೀವಿಷ್ಣುತೀರ್ಥವರದಾಯ ನಮಃ ।
ಶ್ರೀರಾಮತೀರ್ಥವರಪ್ರದಾಯ ನಮಃ ।
ಶ್ರೀಅಧೋಕ್ಷಜಾರ್ಯವರದಾಯ ನಮಃ ।
ಶ್ರೀಪದ್ಮನಾಭಾರ್ಯಸೇವಿತಾಯ ನಮಃ ।
ಶ್ರೀನಾರಾಯಣಾರ್ಯವರದಾಯ ನಮಃ ।
ಶ್ರೀನೃಸಿಂಹಾರ್ಯವರದಾಯ ನಮಃ ।
ಶ್ರೀಅಕ್ಷೋಭ್ಯತೀರ್ಥವರದಾಯ ನಮಃ । ೧೦೦
ಶ್ರೀಮಾಧವಾರ್ಯವರಪ್ರದಾಯ ನಮಃ ।
ಶ್ರೀಜಯತೀರ್ಥಾರ್ಯವರದಾಯ ನಮಃ ।
ಶ್ರೀವ್ಯಾಸಪಾದಾಂಬುಜಾಶ್ರಯಾಯ ನಮಃ ।
ಶ್ರೀರಾಮಚಂದ್ರಪ್ರಿಯಾಯ ನಮಃ ।
ಶ್ರೀಸಾಧುಭಕ್ತಮೋಕ್ಷವರಪ್ರದಾಯ ನಮಃ ।
ಶ್ರೀಷಟ್‌ಸಹಸ್ರಾಧಿಕತ್ರಿಂಶತ್‌ಸಹಸ್ರಾಬ್ದ-ಸುಜೀವಿತಾಯ ನಮಃ ।
ಶ್ರೀಶ್ರೀಮದ್ಬದರಿಕಾವಾಸಾಯ ನಮಃ ।
ಶ್ರೀಪೂರ್ಣಾನಂದವಿನಿರ್ಭರಾಯ ನಮಃ । ೧೦೮

॥ ಶ್ರೀಕೃಷ್ಣಾರ್ಪಣಮಸ್ತು ॥

* * *

# ಶ್ರೀಮಧ್ವಾಷ್ಟೋತ್ತರಶತನಾಮಾವಲೀ

೧. **ವಾಸುದೇವಃ** – ಪೂರ್ವಾಶ್ರಮದಲ್ಲಿ ವಾಸುದೇವ ಎಂಬ ಹೆಸರನ್ನು ಹೊಂದಿದವರು.

೨. **ಮಹಾತೇಜಾಃ** – ಅತ್ಯಧಿಕವಾದ ತೇಜಸ್ಸನ್ನು ಹೊಂದಿದವರು.

೩. **ಮಧ್ಯಗೇಹಾರ್ಯನಂದನಃ** – ಮಧ್ಯಗೇಹಭಟ್ಟರ ಮಗನಾಗಿ ಅವತರಿಸಿದವರು.

೪. **ಗೋದಾತೃಮೋಕ್ಷದಾತಾ** – ಆಕಳನ್ನು ದಾನ ಕೊಟ್ಟವರಿಗೆ ಮೋಕ್ಷವನ್ನು ಕೊಟ್ಟವರು.

೫. **ರೂಪ್ಯಪೀಠೇಶಸೇವಕಃ** – ಉಡುಪಿಯ ಒಡೆಯನಾದ ಅನಂತಾಸನನ ಸೇವಕರು.

೬. **ಭೂತಮಾನ್ಯಃ** – ಭೂತದಿಂದ ಗೌರವಿಸಲ್ಪಟ್ಟವರು.

೭. **ಸಹಜಾಕುಲಿತ್ಥಕುಲತರ್ಪಿತಃ** – ಸಹೋದರಿ ಕೊಟ್ಟ ಹುರುಳಿಯಿಂದ ತೃಪ್ತರಾದವರು.

೮. **ಗೋಪುಚ್ಛಲಂಬನಃ** – ಆಕಳಿನ ಬಾಲವನ್ನು ಹಿಡಿದುಕೊಂಡು ಕಾಡಿಗೆ ಹೋದವರು.

೯. **ಶ್ರೀಮಾನ್** – ಸರ್ವರಿಂದ ಆಶ್ರಯಿಸಲ್ಪಟ್ಟ ಜ್ಞಾನವೆಂಬ ಸಂಪತ್ತುಳ್ಳವರು.

೧೦. **ಬಾಲಲೀಲಾವಿಲಾಸವಾನ್** – ತನ್ನ ತೊದಲುನುಡಿಯಿಂದ ವಾಣಿಯ ವೈಭವವನ್ನು ವಿಶ್ವಕ್ಕೆ ತೋರಿದವರು.

೧೧. **ವೃಷಕ್ರಯೀ** – ಹುಣಸೇಬೀಜವನ್ನು ಕೊಡುವ ಮೂಲಕ ಎತ್ತನ್ನು ಪಡೆದು ಕೊಂಡವರು.

೧೨. **ಜೀರ್ಣಚೇಲಃ** – ಬಟ್ಟೆಯನ್ನು ಹರಿದು ಕೌಪೀನವನ್ನಾಗಿಸಿಕೊಂಡವರು.

೧೩. **ಪ್ರಣೋದೀ** – ಅಜ್ಞಾನವೆಂಬ ಆಪತ್ತನ್ನು ಕಳೆಯುವವರು.

೧೪. **ಲೋಕಸುಂದರಃ** – ಮೂರುಲೋಕಗಳಲ್ಲೂ ಅತ್ಯಂತ ಸುಂದರರು.

೧೫. **ರಮಾಲಾಲ್ಯಃ** – ದುರ್ಗೆಯಿಂದ ಲಾಲಿಸಲ್ಪಟ್ಟವರು.

೧೬. **ಸರ್ವಜ್ಞಃ** – ಎಲ್ಲವನ್ನೂ ಬಲ್ಲವರು.

೧೭. **ತಾತವಿಸ್ಮಯಕಾರಕಃ** – ತಂದೆಗೇ ಆಶ್ಚರ್ಯವನ್ನು ಹುಟ್ಟಿಸಿದವರು.

೧೮. **ಶಿವಜೇತಾ** – ಶಿವ ಎಂಬ ಹೆಸರಿನ ಪಂಡಿತನನ್ನು ಗೆದ್ದವರು.

೧೯. **ದುರ್ಗಮಾರ್ಥವಕ್ತಾ** – ತಿಳಿಯಲು ಕ್ಲಿಷ್ಟವಾಗಿದ್ದ 'ಲಿಕುಚ' ಎಂಬ ಶಬ್ದದ ಅರ್ಥ ವನ್ನು ಹೇಳಿದವರು.

೨೦. **ಭುಜಗದರ್ಪಹಾ** – ಸರ್ಪರೂಪದಲ್ಲಿ ಬಂದ ಮಣಿಮಂತನೆಂಬ ಅಸುರನ ದರ್ಪವನ್ನು ನಾಶ ಮಾಡಿದವರು.

೨೧. **ಸ್ವಸಖಸ್ಯ ಶಿರಃಶೂಲನಾಶನಃ** – ತನ್ನ ಗೆಳೆಯನ ತಲೆನೋವನ್ನು ಪರಿಹರಿಸಿದವರು.

೨೨. **ಭವರೋಗಹಾ** – ಸಂಸಾರವೆಂಬ ರೋಗವನ್ನು ಪರಿಹರಿಸುವವರು.

೨೩. **ಸ್ವೋಪಾಧ್ಯಾಯಜ್ಞಾನದಾತಾ** – ತನ್ನ ಗುರುಗಳಾದ ಅಚ್ಯುತಪ್ರೇಕ್ಷರಿಗೇ ತತ್ತ್ವಜ್ಞಾನವನ್ನು ಕರುಣಿಸಿದವರು.

೨೪. **ವ್ಯಾಸಶಿಷ್ಯಃ** – ವೇದವ್ಯಾಸರ ಶಿಷ್ಯರಾದವರು.

೨೫. **ಯತೀಶ್ವರಃ** – ಯತಿಗಳಿಗೂ ನಿಯಾಮಕರು.

೨೬. **ಅಚ್ಯುತಪ್ರೇಕ್ಷವರದಃ** – ಅಚ್ಯುತಪ್ರೇಕ್ಷರಿಗೆ ಮೋಕ್ಷವೆಂಬ ವರವನ್ನಿತ್ತವರು.

೨೭. **ಮಹಾತೀರ್ಥಜಗದ್ಗುರುಃ** – ಮಹತ್ತರವಾದ ಶಾಸ್ತ್ರತೀರ್ಥದಿಂದ ಜಗತ್ತಿಗೇ ಗುರು ಎನಿಸಿದವರು.

೨೮. **ಆನಂದತೀರ್ಥಃ** – ಸ್ವರೂಪಾನಂದವನ್ನು ಕೊಡುವ ಶಾಸ್ತ್ರಗಳನ್ನು ರಚಿಸಿದವರು.

೨೯. **ಶ್ರೀಮಧ್ವಃ** – ವೇದಗಳ ಪದಮಧುವನ್ನು ಶಾಸ್ತ್ರದ ಮೂಲಕ ಉಣಿಸಿದವರು.

೩೦. **ತತ್ತ್ವಜ್ಞಃ** – ಯಥಾರ್ಥವನ್ನು ತಿಳಿದವರು.

೩೧. **ವೈಷ್ಣವಾಗ್ರಣೀಃ** – ವಿಷ್ಣುಭಕ್ತರಲ್ಲಿ ಅಗ್ರಗಣ್ಯರು.

೩೨. **ಸರ್ವದುರ್ವಾದಿದಂತೀಂದ್ರಮೃಗೇಂದ್ರಃ** – ಕೆಟ್ಟ ವಾದಿಗಳೆಂಬ ಆನೆಗಳಿಗೆ ಸಿಂಹದಂತೆ ಇರುವವರು.

೩೩. **ಜಯಪತ್ರವಾನ್** – ವಾಸುದೇವನೇ ಮೊದಲಾದ ಪ್ರತಿವಾದಿಗಳನ್ನು ವಾದದಲ್ಲಿ ಗೆದ್ದು ಜಯಪತ್ರವನ್ನು ಪಡೆದುಕೊಂಡವರು.

೩೪. **ವಾದಿಸಿಂಹವಿಜೇತಾ** – ವಾದಿಸಿಂಹನೆಂಬ ಪ್ರತಿವಾದಿಯನ್ನು ಗೆದ್ದವರು.

೩೫. **ಬುದ್ಧಿಸಾಗರದರ್ಪಹಾ** – ಬುದ್ಧಿಸಾಗರನೆಂಬ ಪಂಡಿತನ ದರ್ಪಾಪಹಾರಕರು.

೩೬. **ವಿಶ್ವಾದಿವಿಷ್ಣುನಾಮಾರ್ಥಶತಪ್ರವಚನಪ್ರಭುಃ** – ವಿಷ್ಣುಸಹಸ್ರನಾಮದ ಪ್ರತಿಯೊಂದು ನಾಮಕ್ಕೂ ನೂರು ಅರ್ಥಗಳನ್ನು ತಿಳಿಸಲು ಸಮರ್ಥರಾದವರು.

೩೭. **ವೇದವೇದಾಂಗತತ್ತ್ವಜ್ಞಃ** – ವೇದಗಳು ಹಾಗೂ ಉಪನಿಷತ್ತುಗಳು ಮತ್ತು ಬ್ರಹ್ಮಸೂತ್ರಗಳ ಯಥಾರ್ಥ ಆಂತರ್ಯವನ್ನು ತಿಳಿದವರು.

೩೮. **ಸರ್ವವಿದ್ವಚ್ಛಿಖಾಮಣಿಃ** – ಎಲ್ಲ ವಿದ್ವಾಂಸರ ನಡುವೆ ಶಿಖಾಮಣಿಯಂತಿರುವವರು.

೩೯. **ದ್ವಾತ್ರಿಂಶಲ್ಲಕ್ಷಣೋಪೇತಃ** – ಮೂವತ್ತೆರಡು ಸಲ್ಲಕ್ಷಣಗಳಿಂದ ಕೂಡಿದವರು.

೪೦. **ವಿಭೂಷಃ** – ಅಲಂಕಾರರಹಿತರು.

೪೧. **ವಿಶ್ವಭೂಷಣಃ** – ವಿಶ್ವಕ್ಕೇ ಅಲಂಕಾರಪ್ರಾಯರು.

೪೨. **ವೇದವ್ಯಾಸಮತಾಂಬೋಧಿಪೂರ್ಣಚಂದ್ರಃ** – ವೇದವ್ಯಾಸರ ಮತವೆಂಬ ಸಾಗರಕ್ಕೆ ಪೂರ್ಣಚಂದ್ರನಂತಿರುವವರು.

೪೩. **ಗುಣಾರ್ಣವಃ** – ಗುಣಸಮುದ್ರರು.

೪೪. **ಪೂರ್ಣಪ್ರಜ್ಞಃ** – ಪೂರ್ಣನಾದ ಭಗವಂತನ ಪ್ರಕೃಷ್ಟವಾದ ಜ್ಞಾನವುಳ್ಳವರು.

೪೫. **ಜ್ಞಾನದಾತಾ** – ಭಕ್ತರಿಗೆ ಸತ್‌ಜ್ಞಾನವನ್ನು ಕೊಡುವವರು.

೪೬. **ಮಾನಲಕ್ಷಣಕಾರಕಃ** – ಪ್ರಮಾಣಲಕ್ಷಣವೆಂಬ ಪ್ರಕರಣಗ್ರಂಥವನ್ನು ರಚಿಸಿದವರು.

೪೭. **ತತ್ತ್ವಸಂಖ್ಯಾನಕರ್ತಾ** – ತತ್ತ್ವಸಂಖ್ಯಾನವೆಂಬ ಗ್ರಂಥದ ಕರ್ತೃಗಳು.

೪೮. **ಶ್ರೀಮತ್ತತ್ತ್ವವಿವೇಕಕೃತ್** – ತತ್ತ್ವವಿವೇಕಗ್ರಂಥದ ರಚಯಿತೃಗಳು.

೪೯. **ಖಂಡನತ್ರಯಕರ್ತಾ** – ಪರಮತಖಂಡನಾತ್ಮಕವಾದ ಮೂರು ಗ್ರಂಥಗಳನ್ನು ರಚಿಸಿದವರು.

೫೦. **ಶ್ರೀತತ್ತ್ವೋದ್ಯೋತಕಾರಕಃ** – ತತ್ತ್ವೋದ್ಯೋತವೆಂಬ ಗ್ರಂಥವನ್ನು ಶಿಷ್ಯರಿಗೆ ಕೊಟ್ಟವರು.

೫೧. **ತತ್ತ್ವನಿರ್ಣಯಕರ್ತಾ** – ತತ್ತ್ವನಿರ್ಣಯವೆಂಬ ಕೃತಿಯನ್ನು ರಚಿಸಿದವರು.

೫೨. **ಕರ್ಮನಿರ್ಣಯಕಾರಕಃ** – ಕರ್ಮನಿರ್ಣಯವೆಂಬ ಗ್ರಂಥಕಾರರು.

೫೩. **ಕಥಾಲಕ್ಷಣಕರ್ತಾ** – ಕಥಾಲಕ್ಷಣವೆಂಬ ಕೃತಿಕಾರರು.

೫೪. **ಶ್ರೀಗೀತಾಭಾಷ್ಯಕಾರಕಃ** – ಭಗವದ್ಗೀತೆಗೆ ಭಾಷ್ಯ ಬರೆದವರು.

೫೫. **ಗೀತಾತಾತ್ಪರ್ಯಕರ್ತಾ** – ಗೀತಾತಾತ್ಪರ್ಯ ಗ್ರಂಥದ ಕರ್ತೃಗಳು.

೫೬. **ಶ್ರೀಮದೃಗ್ಭಾಷ್ಯಕಾರಕಃ** – ಋಗ್ವೇದಕ್ಕೆ ಭಾಷ್ಯ ಬರೆದವರು.

೫೭. **ಶ್ರೀಸೂತ್ರಭಾಷ್ಯಕರ್ತಾ** – ಬ್ರಹ್ಮಸೂತ್ರಭಾಷ್ಯಕರ್ತೃಗಳು.

೫೮. **ಅಣುವೇದಾಂತಕಾರಕಃ** – ಅಣುಭಾಷ್ಯವೆಂಬ ಸರ್ವಶಾಸ್ತ್ರಾರ್ಥಸಂಗ್ರಹವನ್ನು ಮಾಡಿದವರು.

೫೯. **ಅನುವ್ಯಾಖ್ಯಾನಕರ್ತಾ** – ಅನುವ್ಯಾಖ್ಯಾನದ ರಚನೆಯನ್ನು ಮಾಡಿದವರು.

೬೦. **ಧ್ವಸ್ತಸರ್ವದುರಾಗಮಃ** – ಎಲ್ಲ ಕೆಟ್ಟ ಮತಗಳನ್ನೂ ನಿರ್ಮೂಲನ ಮಾಡಿದವರು.

೬೧. **ಸನ್ನ್ಯಾಯವಿವೃತಿಗ್ರಂಥಕರ್ತಾ** – 'ನ್ಯಾಯವಿವರಣ' ಎಂಬ ಗ್ರಂಥಕಾರರು.

೬೨. **ತ್ರೈಲೋಕ್ಯವಿಶ್ರುತಃ** – ಮೂರುಲೋಕಗಳಲ್ಲೂ ಪ್ರಸಿದ್ಧರಾದವರು.

೬೩. **ಶ್ರೀತಂತ್ರಸಾರಕರ್ತಾ** – ತಂತ್ರಸಾರಸಂಗ್ರಹವನ್ನು ಮಾಡಿದವರು.

೬೪. **ದ್ವಾದಶಸ್ತೋತ್ರಕಾರಕಃ** – ನೈವೇದ್ಯಕಾಲದಲ್ಲಿ ಪಠಿಸಲು ದ್ವಾದಶಸ್ತೋತ್ರಗಳನ್ನು ರಚಿಸಿದವರು.

೬೫. **ಶ್ರೀಮತ್ಪ್ರಣವಕಲ್ಪಾಖ್ಯಗ್ರಂಥಕರ್ತಾ** – ಯತಿಪ್ರಣವಕಲ್ಪವೆಂಬ ಗ್ರಂಥಕಾರರು.

೬೬. **ದಯಾನಿಧಿಃ** – ದಯಾಭರಿತರು.

೬೭. **ಜಯಂತೀಕಲ್ಪಕರ್ತಾ** – ಜಯಂತೀಕಲ್ಪದ ರಚಯಿತೃಗಳು.

೬೮. **ನಖಸ್ತವನಕಾರಕಃ** – ನರಸಿಂಹನಖಸ್ತೋತ್ರವನ್ನು ರಚಿಸಿದವರು.

೬೯. **ಗೋಪ್ಯಭಾರತಸಂಕ್ಷೇಪಕರ್ತಾ** – ರಹಸ್ಯಪ್ರಮೇಯಗಳನ್ನೊಳಗೊಂಡ, ಯಮಕ ಭಾರತ ಮತ್ತು ಮಹಾಭಾರತತಾತ್ಪರ್ಯನಿರ್ಣಯವೆಂಬ ಗ್ರಂಥಗಳ ಕರ್ತೃ.

೭೦. **ಕವಿಕುಲಾಗ್ರಣೀಃ** – ಜ್ಞಾನಿಗಳ ಸಮುದಾಯದಲ್ಲೇ ಅಗ್ರಸ್ಥಾನದಲ್ಲಿರುವವರು.

೭೧. **ಸ್ವಭಕ್ತಕರುಣಾಚೀರ್ಣಕೃಷ್ಣಾಮೃತಮಹಾರ್ಣವಃ** – ತನ್ನ ಭಕ್ತರಾದ ಎಡಪಾಡಿತ್ತಾಯ ರನ್ನು ನಿಮಿತ್ತವಾಗಿ ಇಟ್ಟುಕೊಂಡು ಎಲ್ಲ ಭಕ್ತರ ಮೇಲಿನ ಕಾರುಣ್ಯದಿಂದ ಕೃಷ್ಣಾಮೃತಮಹಾರ್ಣವವೆಂಬ ಕೃತಿಯನ್ನು ರಚಿಸಿದವರು.

೭೨. **ಸದಾಚಾರಸ್ಮೃತಿಗ್ರಂಥಕರ್ತಾ** – ಸದಾಚಾರಸ್ಮೃತಿ ಗ್ರಂಥದ ಕರ್ತೃಗಳು.

೭೩. **ಪವನನಂದನಃ** – ವಾಯುದೇವರ ಮಗ (ಅವತಾರಭೂತರು).

೭೪. **ಶ್ರೀಭಾಗವತತಾತ್ಪರ್ಯನಿರ್ಣಯಗ್ರಂಥಕಾರಕಃ** – ಭಾಗವತತಾತ್ಪರ್ಯನಿರ್ಣಯವೆಂಬ ಗ್ರಂಥಕಾರರು.

೭೫. **ಈಶಾವಾಸ್ಯಾದ್ಯುಪನಿಷದ್ಭಾಷ್ಯಕರ್ತಾ** – ಈಶಾವಾಸ್ಯವೇ ಮೊದಲಾದ ಹತ್ತು ಉಪನಿಷತ್ತುಗಳಿಗೆ ಭಾಷ್ಯವನ್ನು ರಚಿಸಿದವರು.

೭೬. **ಜಿತೇಂದ್ರಿಯಃ** – ಇಂದ್ರಿಯಗಳನ್ನು ಗೆದ್ದವರು.

೭೭. **ಶತಾಧಿಕಗ್ರಂಥಕರ್ತಾ** – ನೂರಾರು ಗ್ರಂಥಗಳನ್ನು ರಚಿಸಿದವರು.

೭೮. **ಶರಣ್ಯತ್ರಾಣತತ್ಪರಃ** – ಶರಣಾಗತರನ್ನು ರಕ್ಷಿಸುವುದರಲ್ಲೇ ರತರಾದವರು.

೭೯. **ಬಾಲಕೃಷ್ಣಪ್ರತಿಷ್ಠಾತಾ** – ಉಡುಪಿಯಲ್ಲಿ ಬಾಲಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸಿದವರು.

೮೦. **ಬಾಲಕರ್ಮಂದ್ಯಭೀಷ್ಟದಃ** – ಬಾಲಸಂನ್ಯಾಸಿಗಳು ಮಾಡುವ ಪೂಜಾಫಲವಾಗಿ ಭಕ್ತರಿಗೆ ಅಭೀಷ್ಟವನ್ನು ಕೊಡುವವರು.

೮೧. **ಗಂಗಾತಾರೀ** – ನೌಕೆಯ ಸಹಾಯವಿಲ್ಲದೆಯೇ ತನ್ನ ಸಾಮರ್ಥ್ಯದಿಂದಲೇ ಗಂಗಾನದಿಯನ್ನು ದಾಟಿದವರು.

೮೨. **ಚಿತ್ರಕರ್ಮಾ** – ಆಶ್ಚರ್ಯಕರಗಳಾದ ಪವಾಡಗಳನ್ನು ಮಾಡಿದವರು.

೮೩. **ಮ್ಲೇಚ್ಛರಾಜೇಂದ್ರಪೂಜಿತಃ** – ತುರುಕರ ರಾಜನಿಂದ ಪೂಜಿಸಲ್ಪಟ್ಟವರು.

೮೪. **ಜಯಸಿಂಹಸಮಾರಾಧ್ಯಃ** – ಜಯಸಿಂಹನೆಂಬ ಕ್ಷತ್ರಿಯ ರಾಜನಿಂದ ಚೆನ್ನಾಗಿ ಮನ್ನಿಸಲ್ಪಟ್ಟವರು.

೮೫. **ಶಂಕರಾರ್ಯವರದಃ** – ತಮ್ಮ ಗ್ರಂಥಪಾಲಕರಾದ, ತ್ರಿವಿಕ್ರಮಪಂಡಿತರ ಸಹೋದರರಾದ ಶ್ರೀಶಂಕರಾರ್ಯರನ್ನು ವರವಿತ್ತು ಸಲಹಿದವರು.

೮೬. **ತ್ರಿವಿಕ್ರಮಾರ್ಯವಿಜಯೀ** – ಹದಿನೈದು ದಿನದ ವಾದದಲ್ಲಿ ತ್ರಿವಿಕ್ರಮಪಂಡಿತರನ್ನು ಗೆದ್ದವರು.

೮೭. **ತ್ರಿವಿಕ್ರಮಸುಪೂಜಿತಃ** – ತ್ರಿವಿಕ್ರಮಪಂಡಿತರಿಂದ ಪೂಜಿಸಲ್ಪಟ್ಟವರು.

೮೮. **ತ್ರಿವಿಕ್ರಮಾಭೀಷ್ಟದಾತಾ** – ತ್ರಿವಿಕ್ರಮಪಂಡಿತರ ಮನೋಭಿಲಾಷೆಯನ್ನು ಪೂರೈಸಿದವರು.

೮೯. **ಶ್ರೀಹೃಷೀಕೇಶಾರ್ಯಸೇವಿತಃ** – ಪಲಿಮಾರುಮಠದ ಮೊದಲ ಯತಿಗಳಾದ ಹೃಷೀಕೇಶ ತೀರ್ಥರಿಂದ ಸೇವಿಸಲ್ಪಟ್ಟವರು.

೯೦. **ಶ್ರೀನೃಸಿಂಹತೀರ್ಥವರದಃ** – ಅದಮಾರುಮಠದ ಮೂಲಯತಿಗಳಾದ ಶ್ರೀಶ್ರೀನೃಸಿಂಹತೀರ್ಥರಿಗೆ ವರವಿತ್ತವರು.

೯೧. **ಶ್ರೀಜನಾರ್ದನವರಪ್ರದಃ** – ಕೃಷ್ಣಾಪುರಮಠದ ಮೂಲಯತಿಗಳಾದ ಶ್ರೀಶ್ರೀಜನಾರ್ದನ ತೀರ್ಥರಿಗೆ ಆಶೀರ್ವದಿಸಿದವರು.

೯೨. **ಶ್ರೀಉಪೇಂದ್ರತೀರ್ಥವರದಃ** – ಪುತ್ತಿಗೆಮಠದ ಮೊದಲ ಯತಿಗಳಾದ ಶ್ರೀಶ್ರೀಉಪೇಂದ್ರ ತೀರ್ಥರನ್ನು ಅನುಗ್ರಹಿಸಿದವರು.

೯೩. **ಶ್ರೀವಾಮನಾರ್ಯವರದಃ** – ಶಿರೂರುಮಠದ ಪ್ರಥಮಯತಿಗಳಾದ ಶ್ರೀಶ್ರೀವಾಮನ ತೀರ್ಥರನ್ನು ವರವಿತ್ತು ಸಲಹಿದವರು.

೯೪. **ಶ್ರೀವಿಷ್ಣುತೀರ್ಥವರದಃ** – ಸೋದೆಮಠದ ಆದ್ಯಯತಿಗಳಾದ ಶ್ರೀಶ್ರೀವಿಷ್ಣುತೀರ್ಥರನ್ನು ವರ ಕೊಟ್ಟು ಅನುಗ್ರಹಿಸಿದವರು.

೯೫. **ಶ್ರೀರಾಮತೀರ್ಥವರಪ್ರದಃ** – ಕಾಣಿಯೂರುಮಠದ ಮೂಲಯತಿಗಳಾದ ಶ್ರೀಶ್ರೀರಾಮ ತೀರ್ಥರನ್ನು ವರದ ಮೂಲಕ ಸಲಹಿದವರು.

೯೬. **ಶ್ರೀಅಧೋಕ್ಷಜಾರ್ಯವರದಃ** – ಪೇಜಾವರಮಠದ ಮೂಲಯತಿಗಳಾದ ಶ್ರೀಶ್ರೀಅಧೋಕ್ಷಜತೀರ್ಥರಿಗೆ ವರವನ್ನಿತ್ತವರು.

೯೭. **ಶ್ರೀಪದ್ಮನಾಭಾಚಾರ್ಯಸೇವಿತಃ** – ಶ್ರೀಶ್ರೀಪದ್ಮನಾಭತೀರ್ಥರಿಂದ ಸೇವಿಸಲ್ಪಟ್ಟವರು.

೯೮. **ಶ್ರೀನಾರಾಯಣಾರ್ಯವರದಃ** – ಶ್ರೀನಾರಾಯಣಪಂಡಿತರಿಗೆ ವರವನ್ನಿತ್ತವರು.

೯೯. **ಶ್ರೀನೃಸಿಂಹಾರ್ಯವರಪ್ರದಃ** – ಶ್ರೀಶ್ರೀನರಹರಿತೀರ್ಥರಿಗೆ ವರವಿತ್ತವರು.

೧೦೦. **ಶ್ರೀಅಕ್ಷೋಭ್ಯತೀರ್ಥವರದಃ** – ಶ್ರೀಶ್ರೀಅಕ್ಷೋಭ್ಯತೀರ್ಥರನ್ನು ಆಶೀರ್ವದಿಸಿದವರು.

೧೦೧. **ಶ್ರೀಮಾಧವಾರ್ಯವರಪ್ರದಃ** – ಶ್ರೀಶ್ರೀಮಾಧವತೀರ್ಥರನ್ನು ವರವಿತ್ತು ಸಲಹಿದವರು.

೧೦೨. **ಶ್ರೀಜಯತೀರ್ಥಾರ್ಯವರದಃ** – ತಮ್ಮ ಅನೇಕಗ್ರಂಥಗಳಿಗೆ ಟೀಕೆಯನ್ನು ಬರೆದ ಜಯತೀರ್ಥರನ್ನು ಅನುಗ್ರಹಿಸಿದವರು.

೧೦೩. **ವ್ಯಾಸಪಾದಾಂಬುಜಾಶ್ರಯಃ** – ವೇದವ್ಯಾಸರ ಪಾದಕಮಲಗಳನ್ನು ಆಶ್ರಯಿಸಿದವರು.

೧೦೪. **ರಾಮಚಂದ್ರಪ್ರಿಯಃ** – ರಾಮದೇವರಿಗೆ ಅತ್ಯಂತ ಪ್ರಿಯರಾದವರು.

೧೦೫. **ಸಾಧುಭಕ್ತಮೋಕ್ಷವರಪ್ರದಃ** – ಸದ್ಭಕ್ತರಿಗೆ ಮೋಕ್ಷವೆಂಬ ವರವನ್ನೀಯುವವರು.

೧೦೬. **ಷಟ್‌ಸಹಸ್ರಾಧಿಕತ್ರಿಂಶತ್‌ಸಹಸ್ರಾಬ್ದಸುಜೀವಿತಃ** – ೩೬,೦೦೦ ವರ್ಷಗಳ ಕಾಲ ಆಯುಸ್ಸುಳ್ಳವರು.

***ವಿಶೇಷ :*** ವಾಯುದೇವರು ದೇವಮಾನದ ನೂರು ವರ್ಷ ಬದುಕುತ್ತಾರೆಂದು 'ಸರಸಭಾರತೀವಿಲಾಸ'ದಲ್ಲಿ ಶ್ರೀವಾದಿರಾಜರು ತಿಳಿಸಿದ್ದಾರೆ. ಮನುಷ್ಯರ ೩೬೦ ವರ್ಷವೆಂದರೆ ದೇವತೆಗಳಿಗೆ ಒಂದು ವರ್ಷ. ೩೬೦X೧೦೦= ೩೬,೦೦೦ ಮಾನುಷವರ್ಷ ಆಯುಸ್ಸು ಉಳ್ಳವರು ಶ್ರೀಮಧ್ವರು –ಎಂದು ಅರ್ಥ.

೧೦೭. **ಶ್ರೀಮದ್ಬದರಿಕಾವಾಸಃ** – ಬದರೀಕ್ಷೇತ್ರದಲ್ಲಿ ಇಂದಿಗೂ ವಾಸವಾಗಿರುವವರು.

೧೦೮. **ಪೂರ್ಣಾನಂದವಿನಿರ್ಭರಃ** – ಪರಿಪೂರ್ಣ ಶ್ರೀಆನಂದತೀರ್ಥರಿವರು.

* * *

